


# ಸಪ್ತಗಿರಿ

ಸೆಪ್ಟೆಂಬರ್ 1986

ಬೆಲೆ: ರೂ ೧

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಶರಣು ಸಿದ್ಧಿ ವಿನಾಯಕ ಶರಣು ವಿದ್ಯಾಪ್ರದಾಯಕ
ಶರಣು ಪಾರ್ವತಿ ತನಯ ಮೂರುತಿ ಶರಣು ಮೂಷಿಕವಾಹನ ॥ ಪ ॥

ನಿಟಲನೇತ್ರನ ಸುತನೆ ನಾಗಭೂಷಣ ಪ್ರಿಯನೆ
ಕಟೆಲ್ಲಕಾಂಕಿತ ಕೋಮಲಾಂಗನೆ ಕರ್ಣಕುಂಡಲಧಾರನೆ ॥ ೧ ॥

ಬಟ್ಟ ಮುತ್ತಿನ ಪದಕಹಾರನೆ, ಬಾಹುಹಸ್ತ ಚತುಷ್ಟನೆ
ಇಟ್ಟ ತೊಡಿಗೆಯ ಹೇಮಕಂಕಣ ಪಾಶ ಅಂಕುಶಧಾರನೆ ॥ ೨ ॥

ಕುಕ್ಷಿ ಮಹಲಂಬೋದರನೆ ಇಕ್ಷು-ಚಾಪನ ಗೆಲಿದವೇ
ಪಕ್ಷಿವಾಹನ ಸಿರಿಪುರಂದರ ವಿಠಲನ ನಿಜದಾಸನೆ ॥ ೩ ॥

ಶ್ರೀ ಪುರಂದರ ದಾಸರು

# ಮುಖ್ಯಗಮನಿಕೆ

* ತಿ. ತಿ. ದೇ. ಧಾರ್ಮಿಕ ಪುಸ್ತಕಗಳಿಗಾಗಿ
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಪಲಕಗಳು, ಕ್ಯಾಲೆಂಡರುಗಳು ಹುಂಡಿಯ ಡಬ್ಬಿಗಳಿಗಾಗಿ
* ವಾರ್ಷಿಕ ಶುಭಾಕಾಂಕ್ಷೆಯ ಪತ್ರಗಳು, ಪಂಚಾಂಗಗಳಿಗಾಗಿ
* ತಿ ತಿ. ದೇವಸ್ಥಾನಗಳ ಭಕ್ತಿಗೀತೆಗಳ ಕ್ಯಾಸೆಟ್‌ಗಳಿಗಾಗಿ

ಡಿ. ಡಿ, ಎಂ. ಓ, ಹಣವನ್ನು ಕಳುಹಿಸುತ್ತ ಕೂಡಲೇ ಬರೆಯಿರಿ.

**ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್)**
**ತಿ.ತಿ. ದೇವಸ್ಥಾನಗಳು, ತಿರುಪತಿ - ೫೧೭ ೫೦೧.**

# ಸಪ್ತಗಿರಿ

ತಿ. ತಿ. ದೇ. ಗಳ ಸಚಿತ್ರ ಮಾಸ ಪತ್ರಿಕೆ
ಕನ್ನಡ, ಹಿಂದಿ, ತೆಲುಗು, ತಮಿಳು, ಆಂಗ್ಲ ಭಾಷೆಗಳಲ್ಲಿ ಪ್ರಕಟವಾಗುವುದು.

**ಪತ್ರಿಕೆಯ ಪ್ರತಿಗಳಿಗಾಗಿ, ಏಜನ್ಸಿಗಾಗಿ, ಜಾಹೀರಾತುಗಳಿಗಾಗಿ**
**ಡಿ.ಡಿ, ಎಂ.ಓ, ಹಣವನ್ನು ಕಳುಹಿಸುತ್ತ ಕೂಡಲೇ ಬರೆಯಿರಿ.**

ಸಂಪಾದಕರು
**ಸಪ್ತಗಿರಿ**
**ತಿ.ತಿ. ದೇವಸ್ಥಾನಗಳು, ತಿರುಪತಿ - ೫೧೭ ೫೦೧**




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವ್, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೮]  ಸೆಪ್ಟೆಂಬರ್ ೧೯೮೬  [ಸಂಚಿಕೆ ೪


# ವಿಷಯಸೂಚಿ



ಮುಖಚಿತ್ರ : ವಿನಾಯಕ ಚಿತ್ರ ಬಾಬುನಾಥ್.

ಒಳಗಡೆ: ತಿರುಮಲೆಯ ಬ್ರಹ್ಮೋತ್ಸವದಲ್ಲಿ ಧ್ವಜಾರೋಹಣ ಗರುಡವಾಹನ

# ಸಂಪಾದಕೀಯ

ದೈವದ ರೂಪವನ್ನು ಆರಾಧಿಸಲು ಮೂಲವಸ್ತುವಾಗಿ ಲೋಹ ಶಿಲಾ ದಾರುಗಳನ್ನೂ, ಮಣ್ಣನ್ನೂ, ಉಪಯೋಗಿಸಿ ದೈವದ ರೂಪವನ್ನು ತಿದ್ದುವುದು ಭಾರತೀಯರಲ್ಲೇ ಅಲ್ಲ, ಎಲ್ಲ ವಿಗ್ರಹಾರಾಧಕ ಜನಾಂಗಗಳಲ್ಲೂ ಇರುವ ಪರಂಪರೆಯೇ. ಭಾರತೀಯರಲ್ಲಿ ಮಾತ್ರ-ಸನಾತನ ಧರ್ಮ-ಈ ವಿಗ್ರಹಾರಾಧನೆಗೆ ವಿಧಿ ನಿಶೇಧಗಳನ್ನು ಸೂತ್ರೀಕರಿಸಿ ಆಗಮಶಾಸ್ತ್ರಗಳಲ್ಲಿ ಕಟ್ಟುದಿಟ್ಟ ಮಾಡಿದ್ದು ಸರ್ವರಿಗೂ ತಿಳಿದದ್ದೇ. ರಾಮ ಕೃಷ್ಣ, ಹನುಮಂತ, ವರಾಹ, ನರಸಿಂಹ, ಶಿವ ಮೊದಲಾದ ದೇವರೂಪಗಳನ್ನು ಲೋಹ ಶಿಲಾದಾರುಗಳಲ್ಲಿ ಹೆಚ್ಚಿಗೆ ಕಂಡರೂ, ಇವೆಲ್ಲ ಶಾಶ್ವತ ಪೂಜೆಗಾಗಿ ಇಟ್ಟುಕೊಂಡ, ಮೇಲೆ ದೇವಾಲಯವನ್ನೆಬ್ಬಿಸಿ ಸ್ಥಿರ ಮೂರ್ತಿಗಳನ್ನಾಗಿಸಿ ತೀರ್ಥಕ್ಷೇತ್ರಗಳಲ್ಲಿ ಯಾತ್ರಾಕ್ಷೇತ್ರಗಳಲ್ಲಿ ಪ್ರತಿಷ್ಠಾಪಿಸಿದಂತಹ ಘಟನೆಗಳನ್ನು ಇತಿಹಾಸದಲ್ಲಿ ಅಸಂಖ್ಯವಾಗಿ ಕಾಣಬಹುದು. ಜೊತೆಗೇ ಹಬ್ಬದ ಹೊತ್ತಿಗೆ ಪೂಜೆಮಾಡಿ ವಿಸರ್ಜಿಸುವ ಇನ್ನೊಂದು ಮೂರ್ತಿಯೂ ಇದೆ. ಇದು ವಿನಾಯಕಪೂಜೆಯಲ್ಲಿ ಬರುವ ಮೃಣ್ಮೂರ್ತಿ, (ಮಿಕ್ಕ ತತ್ಕಾಲಿಕ ಪೂಜಾ ಪದ್ಧತಿಗಳು ಸಂಕೇತಗಳು, ಮೂರ್ತಿಗಳಲ್ಲ ಉದಾಹರಣೆಗೆ-ಕಳಶ, ಇತ್ಯಾದಿ)

ವಿನಾಯಕನಿಗೆ ಜಾತಿ, ಪಂಥ, ವಯಸ್ಸು, ಲಿಂಗಭೇದವಿಲ್ಲದೆ ಪೂಜೆ ಸಲ್ಲುತ್ತದೆ. ಆತ ವಿಘ್ನ ನಿವಾರಕ. ಬುದ್ಧಿ ಪ್ರೇರಕ, ಸಿದ್ಧಿಪ್ರದಾಯಕ. ಮುಕ್ತಿಯ ಮಾರ್ಗದಲ್ಲಿ ಮೊದಲಪೂಜೆಗೆ ಅರ್ಹ. ಗೊಜಲು ಗೊಜಲಾದ ಮನೋಭೂಮಿಕೆಯಲ್ಲಿ ಪ್ರತಿಕ್ಷಣವೂ ಮಂಗಚಿತ್ತ ಗಮ್ಯವನ್ನು ಮರೆಯದಿರಲಿ ಎಂದು ಕ್ರಿಯೆಗೆ ಮೊದಲು ಈತನ ನೆನಪು ಮಾಡಿಕೊಂಡು ಅನುಗ್ರಹವನ್ನು ಬೇಡಿ ಕೆಲಸ ಆರಂಭಿಸುವುದು ಭಾರತೀಯರಿಗೆ ಪರಂಪರೆಯಿಂದ ಬಂದದ್ದು, ಐಹಿಕವಾದ ಅಂತರಾಯಗಳೇ ಹೆಚ್ಚು ಅಧ್ಯಾತ್ಮ ಸಾಧನೆಯಲ್ಲಿ. ಮಣ್ಣಿನ ವಾಸನೆಯನ್ನು ಮೀರುವುದರಲ್ಲಿದೆ ಮುಕ್ತಿಯ ಸೋಪಾನ. ಎಂತಲೇ ಮಣ್ಣಿನ ಮೂರ್ತಿಯ ಪೂಜೆ.

ಗಣಪತಿಯ ಪೂಜೆ ಸಾಮೂಹಿಕವಾಗಿ ಮಾಡುವಂತಹದು. ಮೊದಲಿಗೆ ಮನೆಮನೆಯಲ್ಲೂ ಗಣಪತಿ ಪೂಜೆಯಾಗಿ, ಅಂದು ಸಂಜೆ ಗಣಪತಿದರ್ಶನಕ್ಕೆಂದೇ ಬಾಲಕ ಬಾಲಕಿಯರು ಗುಂಪು ಗುಂಪಾಗಿ ಇತರರ ಮನೆಗಳಿಗೆ ಹೊರಡುತ್ತಾರೆ, ವಿನಾಯಕ ವಿಸರ್ಜನೆಯೂ ಒಂದು ಉತ್ಸವವೇ, ಸಾಮೂಹಿಕವಾಗಿ ಗಂಟೆಜಾಗಟೆಗಳೊಂದಿಗೆ ಮೇಳತಾಳ ಭಜನೆ ಭಕ್ತಿಗಳೊಂದಿಗೆ ನಡೆಯುವಂತಹದ್ದು.

ಮಣ್ಣಿನ ಗಣೇಶನನ್ನು ನೀರಿನಲ್ಲಿ ವಿಸರ್ಜಿಸುವುದೊಂದು ಸಾಂಕೇತಿಕ ಕ್ರಿಯೆ. ಭೂತ ಭೂತದಲ್ಲಿ ಬೆರೆತು, ಬಯಲ ಶಾಂತಿಯನ್ನು ಪಡೆಯುವಿಕೆಯ ಸಂಕೇತ. ಇಲ್ಲಿ ಜನವೆಲ್ಲ ಭಾಗವಹಿಸುವುದು ಒಂದು ಐಕ್ಯತೆಯ ಆದರ್ಶದ ಅಭ್ಯುದಯದ ಕುರುಹು. ಅಡ್ಡಿ ಅಂತರಾಯಗಳನ್ನು ಅವನ ಪೂಜೆಯ ಮೂಲಕ ಹಿಂದಿಕ್ಕಿ, ಸಮಷ್ಟಿ ಅಭಿವೃದ್ಧಿಯನ್ನು ಸಾಧಿಸುವುದು ಉದ್ದೇಶ.

ಭಾರತದ ಇಂದಿನ ಪರಿಸ್ಥಿತಿಯಲ್ಲಿ ಈ ಭಾವೈಕ್ಯದ ಅಭ್ಯುದಯ ಯತ್ನ ಎಂದಿಗಿಂತಲೂ ಹೆಚ್ಚು ಅಗತ್ಯವಿದೆಯೆಂಬುದು ವೇದ್ಯವಾದದ್ದೇ. ವಿನಾಯಕ ಪೂಜೆ ಸಾಮಾಜಿಕವಾಗಿ ಏಕತೆಯ ಪ್ರೇರಣೆ ನೀಡಬಲ್ಲದು. ಹಾಗಾಗಿ ವಿನಾಯಕ ಪೂಜೆಯ ಹಾಡು, ಹಸೆ, ಹರಿಕಥೆ, ಆರಾಧನೆ, ವಿಚಾರ, ಉತ್ಸಾಹ, ಹೆಚ್ಚಾಗಿ ಸರ್ವಜನಸುಖದತ್ತ ಮುಂದುವರೆಯುವ ಬುದ್ಧಿಯನ್ನು ಆತನೇ ನೀಡಲೆಂದು ಪ್ರಾರ್ಥಿಸಿ ನಡೆಯುವ.

# ಕುಚೇಲೋಪಾಖ್ಯಾನ

ಪಿತಾ ತ್ವಂ, ಮಾತಾ ತ್ವಂ, ದಯಿತ
ತನಯಸ್ತ್ವಂ, ಪ್ರಿಯಸುಹೃತ್ ।
ತ್ವಮೇವ, ತ್ವಂಮಿತ್ರಂ ಗುರುರಪಿ
ಗತಿಶ್ಚಾಸಿ ಜಗತಾಂ ।
ತ್ವದೀಯ ತ್ವತ್‌ಭೃತ್ಯ ಸ್ತವ
ಪರಿಜನಃ ತ್ವದ್ ಗತಿರಯಂ ।
ಪ್ರಪನ್ನಶ್ಚೈನಂ ಸತ್ಯಹಮಪಿ
ತವೈವಾಸ್ಮಿ ಹಿಭರಃ ॥

ಅನಂತ ಕಲ್ಯಾಣ ಗುಣ ಪರಿಪೂರ್ಣನಾದ ಪರಮಾತ್ಮನು, ತಂದೆಯಂತೆ ತಾಯಿಯಂತೆ, ಮಿತ್ರನಂತೆ, ಗುರುವಿನಂತೆ, ಇತರ ಬಂಧು ಜನರಂತೆ, ಕೆಲವು ಸಂದರ್ಭಗಳಲ್ಲಿ ಭೃತ್ಯನಂತೆ ಕೂಡ ಸಂಕಲ್ಪಿಸಿಕೊಂಡು ಮಾನವನನ್ನು ರಕ್ಷಿಸುತ್ತಾನೆ. ಸ್ವಾಮಿಯ ಕರುಣೆ, ವಾತ್ಸಲ್ಯಕ್ಕೆ ಎಲ್ಲೆಯೇ ಇಲ್ಲ. 'ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೆ' ಎಂಬ ಗಾದೆಯಂತೆ ಮಾನವಕೋಟಿಯ ರಕ್ಷಣೆಯೇ ಪರಮಾತ್ಮನ ಸ್ವಭಾವ. ಅವರ ಪಾಲನೆ ಪೋಷಣೆಯೇ ಅವನ ಲೀಲೆ ಎಂದು ಹೇಳಬಹುದು.

ಆದರೆ ಮಾನವನು ಮೇಲೆ ಕಂಡ ಸಂಬಂಧವನ್ನು ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಸ್ವತಂತ್ರವಾಗಿ ವರ್ತಿಸಬಾರದು, ಅನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯವರ್ಜನ ಮಹಾವಿಶ್ವಾಸ, ಕಾರ್ಪಣ್ಯ, ಆತ್ಮಭರ ಸಮರ್ಪಣ– ಎಂಬ ಪಂಚ ಅಂಗ ಸಹಿತವಾದ ಶರಣಾಗತಿಯನ್ನು ಮಾಡಿ, ಅನನ್ಯಗತಿಕನಾಗಿ ಅನನ್ಯ ಭಕ್ತಿಯಿಂದ ಪರಮಾತ್ಮನನ್ನು ಪ್ರಾರ್ಥಿಸಬೇಕು. ಹೀಗೆ ಧ್ಯಾನಿಸಿ, ಸ್ಮರಿಸಿ, ಭಜಿಸಿದರೆ ಮಾನವನು, ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗಿ ಇಹಪರ ಸೌಖ್ಯ ಪಡೆಯುವನು, ಎಂದು ಯಾಮುನ ಮುನಿಗಳು ಉಪದೇಶಮಾಡಿದ್ದಾರೆ. ಈ ವಿಷಯವನ್ನು ಕುಚೇಲಾನುಗ್ರಹದಲ್ಲಿ ಕಾಣಬಹುದು.

ಕುಚೇಲನು ಬ್ರಹ್ಮವಾದಿಗಳಲ್ಲಿ ಸರ್ವೋತ್ತಮನು. ಜಿತೇಂದ್ರಿಯನು, ವಿರಕ್ತನು, ಶ್ರೀಕೃಷ್ಣನ ಬಾಲ್ಯ ಸ್ನೇಹಿತನು, ಅವರಿಬ್ಬರೂ ಸಾಂದೀಪಿನೀಋಷಿಯ ಗುರುಕುಲದಲ್ಲಿ ವ್ಯಾಸಂಗಮಾಡಿದವರು.

ಶಿಕ್ಷಣದ ನಂತರ ಕುಚೇಲನು ಗೃಹಸ್ಥಾಶ್ರಮ ಸ್ವೀಕಾರಮಾಡಿ ಜೀವನ ನಡೆಸುತ್ತಿದ್ದನು. ಆದರೆ ದಾರಿದ್ರ್ಯದುಃಖ ಅವನಿಗಿದ್ದಿತು. ಇದ್ದುದರಲ್ಲಿ ತೃಪ್ತಿಪಟ್ಟುಕೊಂಡು ಜೀವನ ಸಾಗಿಸುವುದು ಅವನ ಸ್ವಭಾವವಾಗಿದ್ದಿತು. ಇವರಿಗೆ ಕ್ಷುತ್‌ಕ್ಷಮೆ ಎಂಬ ಅನ್ವರ್ಥ ಹೆಸರಿನ ಪತ್ನಿ ಮತ್ತು ಮಕ್ಕಳು ಇದ್ದರು.

ಹೀಗಿರುವಾಗ, ಸಾಕಷ್ಟು ಆಹಾರವಿಲ್ಲದೆ ಕೃಶಳಾಗಿದ್ದ ಪತ್ನಿಯು ಹಿಂದಾನೊಂದು ದಿನ ಪತಿಯನ್ನು ಕುರಿತು ಭಯದಿಂದಲೇ ಹೀಗೆ ಹೇಳಿದಳು–"ಸ್ವಾಮಿ, ಶ್ರೀಕೃಷ್ಣನು ನಿಮ್ಮ ಬಾಲ್ಯಸ್ನೇಹಿತರಾಗಿದ್ದನು ಎಂದು ಹೇಳಿದ್ದೀರಿ. ಸಾಧುಗಳ ಪೋಷಕ, ಕೃಪಾವಾತ್ಸಲ್ಯವುಳ್ಳವನು, ಕರುಣಾಶಾಲಿ ಎಂದು ಪ್ರಸಿದ್ಧನಾಗಿರುವ ಶ್ರೀಕೃಷ್ಣನ ಬಳಿಗೆ ನೀವು ಹೋಗಿ ಬರಬಾರದೆ? ಅವನು ನಿಮ್ಮ ದಾರಿದ್ರ್ಯವನ್ನು ಖಂಡಿತ ಸಹಿಸನು ಎಂಬ ನಂಬಿಕೆ ನನಗಿದೆ" ಎಂದಳು.

ಕುಚೇಲನು ಯಾರನ್ನೂ ಯಾಚಿಸಿದವನಲ್ಲ. ಹಾಗೆ ಮಾಡುವುದು ಅವನ ಸ್ವಭಾವಕ್ಕೆ ವಿರೋಧವಾಗಿತ್ತು. ಆದರೆ ಪತ್ನಿಯ ಸೂಚನೆಪ್ರಕಾರ ಶ್ರೀಕೃಷ್ಣದರ್ಶನ ಲಾಭ ದೊರೆಯುವುದೆಂದು ಸಂತೋಷಪಟ್ಟನು. ಶ್ರೀಕೃಷ್ಣನ ಬಳಿಗೆ ಹೋಗಲು ಸಿದ್ಧನಾದನು. ದೇವತಾಸ್ವರೂಪನಾದ ಕೃಷ್ಣನನ್ನು ನೋಡಲು ಬರೀ ಕೈಯಲ್ಲಿ ಹೇಗೆ ಹೋಗುವುದು ಎಂದು ಯೋಚಿಸುತ್ತಿರುವಾಗ ಅವನ ಪತ್ನಿಯು ಪಕ್ಕದ ಮನೆಗೆಹೋಗಿ ಎರಡು ಹಿಡಿ ಅವಲಕ್ಕಿಯನ್ನು ತಂದು ಕೊಟ್ಟಳು. ಕುಚೇಲನು ಅದನ್ನೇ ಕಾಣಿಕೆಯನ್ನಾಗಿ ತೆಗೆದುಕೊಂಡು, ತನ್ನ ವಸ್ತ್ರದಲ್ಲಿ ಅದನ್ನು ಕಟ್ಟಿಕೊಂಡು ದ್ವಾರಕೆಗೆ ಪ್ರಯಾಣ ಮಾಡಿದನು.

**ಶ್ರೀ ಡಿ. ಕೃಷ್ಣಯ್ಯಂಗಾರ್**

ವೈಕುಂಠದಂತೆ ಶೋಭಾಯಮಾನವಾಗಿ ಪ್ರಕಾಶಿಸುತ್ತಿದ್ದ ದ್ವಾರಕೆಯ ಮಹಲುಗಳನ್ನು ಆಶ್ಚರ್ಯದಿಂದ ನೋಡುತ್ತ ಕುಚೇಲನು ಬರುತ್ತಿರುವಾಗ ರುಕ್ಮಿಣೀದೇವಿಯ ಅರಮನೆಯ ಮುಂದೆ ನಿಂತು ಅಲ್ಲಿಯ ವೈಭವವನ್ನು ಕಂಡು ಹರ್ಷಿತನಾಗಿ ನಿಂತನು. ಸಭಾಂಗಣದಲ್ಲಿ ಅಡ್ಡಾಡುತ್ತಿದ್ದ ಶ್ರೀಕೃಷ್ಣನು, ಕುಚೇಲನನ್ನು ಕಂಡು, ತಕ್ಷಣ ಓಡಿಬಂದು ಅವನ ಕೈ ಹಿಡಿದು ಕುಶಲಪ್ರಶ್ನೆಮಾಡಿ ಒಳಕ್ಕೆ ಕರೆದುಕೊಂಡು ಹೋಗಿ ಮಂಚದ ಮೇಲೆ ಕೂರಿಸಿದನು. ಅನಂತರ ರುಕ್ಮಿಣೀದೇವಿಯು ಕಳಶಟಲ್ಲಿ ನೀರುತಂದಳು. ಅರ್ಘ್ಯ, ಪಾದ್ಯ ಆಚಮನೀಯ, ಮಧುಪರ್ಕಾದಿ ಉಪಚಾರಗಳನ್ನು ಕುಚೇಲನಿಗೆ ಅವರು ಮಾಡಿದರು.

ಸರಿಯಾದ ವೇಷಭೂಷಣಗಳಿಲ್ಲದ ಕೃಶಾಂಗನಾದ ಕುಚೇಲನಿಗೆ 'ಶ್ರೀಕೃಷ್ಣ ರುಕ್ಮಿಣೀದೇವಿ ಇಬ್ಬರೂ ಮಾಡಿದ ಶೈತ್ಯೋಪಚಾರಗಳನ್ನು ಕಂಡು ಅರಮನೆಯ ಊಳಿಗದವರು ಅತ್ಯಾಶ್ಚರ್ಯಪಟ್ಟರು. ಶ್ರೀಕೃಷ್ಣನು ಕುಚೇಲನನ್ನು ಹತ್ತಿರಕುಳ್ಳಿರಿಸಿಕೊಂಡು, ತಾವು ಗುರುಕುಲದಲ್ಲಿ ಕಳೆದ ದಿನಗಳನ್ನು ನೆನಪುಮಾಡಿಕೊಳ್ಳುತ್ತ ವಿನೋದದಿಂದ ಇರುವುದನ್ನು ನೋಡಿ ಅರಮನೆಯ ಜನರು ಆಶ್ಚರ್ಯಪಟ್ಟರು ಶ್ರೀಕೃಷ್ಣನು ಗುರುವಿನ ಮಹಿಮೆಯನ್ನು ಕೊಂಡಾಡಿ ಗುರುವಿನ ಅನುಗ್ರಹಕ್ಕೆ ಪಾತ್ರನಾದವನು ಮೋಕ್ಷ ಪಡೆಯುವನೆಂದು ಸೂಚಿಸಿದನು. ತಕ್ಷಣ ಕುಚೇಲನು "ಹೇ ಕೃಷ್ಣಾ! ನೀನು ಜಗತ್ತಿಗೇ ಗುರು. ಪರಮ ಗುರು. ಆ ಗುರುವಿನ ಅನುಗ್ರಹ ಹಾಗಿರಲಿ ಸತ್ಯಸಂಕಲ್ಪನೂ, ಅಪಾರ ಮಹಿಮೆಯುಳ್ಳವನೂ ಆದ ನಿನ್ನ ದರ್ಶನವಾಗಿ ನಾನು ಕೃತಾರ್ಥನಾದೆನು. ಹೇ! ಪ್ರಭು ನೀನು ಸಮಸ್ತ ಪುರುಷಾರ್ಥಕ್ಕೂ ಕಾರಣನು. ಅಂತಹ ಮಹಾಮಹಿಮನಾದ

ನೀನು ಗುರುಕುಲವಾಸ ಮಾಡಿದುದು ಪರಮಾಶ್ಚರ್ಯ" ಎಂದನು.

ಹೀಗೆ ಅವರ ವಿನೋದ ಸಂಭಾಷಣೆ ಮುಂದುವರಿಯುತ್ತಿದ್ದಾಗ ಶ್ರೀಕೃಷ್ಣನು, ಕುಚೇಲನನ್ನು ಕುರಿತು, "ಮಿತ್ರಾ! ನಮ್ಮ ಅತ್ತಿಗೆ ಕ್ಷುತ್‌ಕ್ಷಮೆಯು ನಿನ್ನನ್ನು ಬರೀ ಕೈಯಲ್ಲಿ ಕಳುಹಿಸಲಾರಳು. ಅವಳು ಕಳುಹಿಸಿರುವುದನ್ನು ಸಂಕೋಚವಿಲ್ಲದೆ ಕೊಡು, ತಿನ್ನುವೆನು" ಎಂದನು.

ಕುಚೇಲನು ಅವಲಕ್ಕಿಯ ಗಂಟನ್ನು ನಾಚಿಕೆಯಿಂದ ನೋಡುತ್ತಿರಲು, ಶ್ರೀಕೃಷ್ಣನ ಬಲವಂತಕ್ಕೆ ಕಟ್ಟುಬಿದ್ದು, ಅವಲಕ್ಕಿಯ ಗಂಟನ್ನು ಬಿಚ್ಚಿ, ಒಂದು ಹಿಡಿಯಷ್ಟನ್ನು ಶ್ರೀಕೃಷ್ಣನ ಕೈಗೆ ಕೊಟ್ಟನು. ತನಗೆ ಬಹು ಇಷ್ಟವಾದ ವಸ್ತು ಅದೆಂದು ಹೇಳುತ್ತ, ಕೃಷ್ಣನು ಅವಲಕ್ಕಿಯನ್ನು ತಿಂದನು. ಹಾಗೆ ತಿನ್ನುವಾಗ ಕುಚೇಲನನ್ನು ಪರೋಕ್ಷವಾಗಿ ಅನುಗ್ರಹಿಸಿದನು. ಇನ್ನೊಂದು ಹಿಡಿ ಅವಲಕ್ಕಿಗೆ ಶ್ರೀಕೃಷ್ಣನು ಕೈನೀಡಿದಾಗ, ರುಕ್ಮಿಣೀದೇವಿಯು, ಪ್ರಭೂ, ಒಂದು ಹಿಡಿಯಿಂದಲೇ ನೀನು ತೃಪ್ತನಾಗಿ, ಕುಚೇಲನಿಗೆ ಇಹಪರ ಸೌಖ್ಯವನ್ನು ಅನುಗ್ರಹಿಸಿರುವೆ, ಇಷ್ಟೇಸಾಕು–ಎಂದಳು.

ಯಾವಾಗ ಶ್ರೀಕೃಷ್ಣನು, ಕುಚೇಲನನ್ನು ಅನುಗ್ರಹಿಸಬೇಕೆಂದು ಸಂಕಲ್ಪ ಮಾಡಿದನೋ, ತಕ್ಷಣ ಕುಚೇಲನ ಗುಡಿಸಲು ಅರಮನೆಯಂತೆ ಪರಿವರ್ತಿತವಾಯಿತು. ಮನೆಯ ಸುತ್ತ ಉದ್ಯಾನವನಗಳು, ತಿಳಿನೀರು ತುಂಬಿದ ಸರೋವರಗಳು, ಸ್ಫಟಿಕ ಶಿಲೆಯ ಆಸನಗಳು ಎಲ್ಲವೂ ಅಂದವಾಗಿ ನಿರ್ಮಾಣವಾಗಿದ್ದುವು. ಮಕ್ಕಳು, ಪರಿಜನರು ಎಲ್ಲರೂ ಸಂಭ್ರಮದಿಂದ ಓಡಾಡುತ್ತಿದ್ದರು. ಒಳಗೆ ಹೋಗಿ ನೋಡಿದರೆ ರತ್ನಖಚಿತ ಆಸನಗಳು, ಚಿನ್ನದ ಮೇಲುಕಟ್ಟಿನ ಅಂದವಾದ ಮಂಚಗಳು, ದಂತದ ಹಿಡಿಯ ಚಾಮರಗಳು, ಬಂಗಾರದ ದೀಪಸ್ತಂಭಗಳು – ಇತ್ಯಾದಿ ವೈಭವಗಳೆಲ್ಲಾ ನಿರ್ಮಿತವಾದುವು. ಇದನ್ನು ಕಂಡು ಎಲ್ಲರಿಗೂ ಅತ್ಯಾಶ್ಚರ್ಯವಾಯಿತು.

ಅತ್ತ ಕುಚೇಲನು, ರಾತ್ರಿ ಶ್ರೀಕೃಷ್ಣನ ಅರಮನೆಯಲ್ಲಿ ತಂಗಿದ್ದು, ಪ್ರಾತಃಕಾಲ ತನ್ನ ನಿತ್ಯ ಕರ್ಮಗಳನ್ನೆಲ್ಲಾ ಮುಗಿಸಿ, ತನ್ನ ಊರಿಗೆ ಪ್ರಯಾಣಮಾಡಲು ಸಿದ್ಧನಾದಾಗ, ಶ್ರೀಕೃಷ್ಣನು ಅವನ ಬಳಿಬಂದು ಹೋಗಿ ಬರುವಂತೆ ಹೇಳಿ, ಅರಮನೆ ಬಾಗಿಲುವರೆಗೂ ಬಂದು ಅವನನ್ನು ಬೀಳ್ಕೊಟ್ಟನು. ಹೀಗೆ ಕುಚೇಲನು ಹಿಂತಿರುಗಿ ನಡೆದುಬರುವಾಗ ಶ್ರೀಕೃಷ್ಣನ ಉಪಚಾರಾದಿ ವೈಖರಿಯನ್ನೂ, ಅವನ ಪ್ರೀತಿ ವಿಶ್ವಾಸಪೂರ್ವಕ ಮಾತುಗಳನ್ನು ನೆನೆದುಕೊಳ್ಳುತ್ತ ಬರುತ್ತಿದ್ದನು. ತಾನು ಕೃಷ್ಣನ ಬಳಿಗೆಬಂದ ಉದ್ದೇಶ ತಿಳಿಸಲಿಲ್ಲವಲ್ಲಾ ಎಂಬ ಯೋಚನೆಯೇ ಅವನಿಗೆ ಬರಲಿಲ್ಲ. ಆದರೆ ತನ್ನ ಪತ್ನಿ ಕ್ಷುತ್‌ಕ್ಷಮೆಯು ಏನೆಂದುಕೊಳ್ಳುವಳೋ ಎಂಬ ಯೋಚನೆ ಅವನಿಗೆ ಬಂದಿತು. ಅಷ್ಟರಲ್ಲಿ ತನ್ನ ಮನೆಯ ಹತ್ತಿರ ಬಂದನು. ಎಲ್ಲವೂ ಅಸ್ತವ್ಯಸ್ತವಾಗಿರುವುದನ್ನು ಆಶ್ಚರ್ಯದಿಂದ ನೋಡಿ, ಆ ವೈಭವವೆಲ್ಲವೂ ಶ್ರೀಕೃಷ್ಣನ ಅನುಗ್ರಹ ಎಂಬ ನಂಬಿಕೆ ಅವನಲ್ಲಿ ಉಂಟಾಯಿತು. ಹೀಗೆ ಶ್ರೀಕೃಷ್ಣನ ಪರಮ ಕಾರುಣ್ಯವನ್ನು ಕೃತಜ್ಞತೆಯಿಂದ ನೆನಪು ಮಾಡಿಕೊಳ್ಳುತ್ತಿರುವಾಗ, ಅವನ ಪತ್ನಿಯು ಪೀತಾಂಬರವನ್ನು ಧರಿಸಿ, ಆರತಿ ಹಿಡಿದು ಅವನ ಮುಂದೆ ನಿಂತಳು. ದಂಪತಿಗಳು ಸಂತೋಷದಿಂದ, ಇದೆಲ್ಲವೂ ಶ್ರೀಕೃಷ್ಣ ದರ್ಶನದ ಫಲ–ಎಂದು ತಿಳಿದು ಸ್ವಾಮಿಯ ಪರಮ ಔದಾರ್ಯವನ್ನು ಜ್ಞಾಪಿಸಿಕೊಂಡು ಮನೆಯೊಳಕ್ಕೆ ಹೋದರು. ತನ್ನ ಬಂಧು ಬಳಗವು ಸಂತೋಷದಿಂದ ಇರುವುದನ್ನು ಕಂಡು ಅವನು ಹಿಗ್ಗಿ ಹರ್ಷಿಸಿದನು.

ಅನಂತರ ಕುಚೇಲನು, ಶ್ರೀಕೃಷ್ಣನ ಪರಮ ಔದಾರ್ಯವನ್ನು, ಕರುಣೆಯನ್ನೂ ಮೇಲೆ ಮೇಲೆ ಜ್ಞಾಪಿಸಿಕೊಳ್ಳುತ್ತ ಕೃತಜ್ಞತೆಯಿಂದ ಅವನಿಗೆ ಮನಸ್ಸಿನಲ್ಲಿ ಭಕ್ತಿಪೂರ್ವಕ ವಂದನೆಸಲ್ಲಿಸಿದನು. ಸಂಪತ್ತು ಮಾನವನನ್ನು ಭೋಗಾಸಕ್ತಿಯಲ್ಲಿ ನೆಲಸುವಂತೆ ಮಾಡಿ, ಪರಮಾತ್ಮನನ್ನು ಮರೆಯುವಂತೆ ಮಾಡುತ್ತದೆ. ಆದರೆ ತನಗೆ ಹಾಗಾಗದಿರಲಿ, ಶ್ರೀಕೃಷ್ಣನ ಸ್ನೇಹ, ಮಮತೆ, ಪ್ರೀತಿ ವಿಶ್ವಾಸಗಳು ಸದಾ ದೊರೆಯುವಂತೆ ಅವನು ಕರುಣಿಸಲಿ, ತನ್ನ ಭಕ್ತಿಯು ಶ್ರೀಕೃಷ್ಣನಲ್ಲಿ ಸದಾ ನೆಲಸುವಂತೆ ಅವನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದನು. ಕೊನೆಗೆ ಕುಚೇಲನು ಕರ್ಮಬಂಧವನ್ನು ನೀಗಿ ಮೋಕ್ಷಸಾಮ್ರಾಜ್ಯ ಪಡೆದನು. ಅವನಂತೆ, ಮಾನವರು ಭಗವಂತನಲ್ಲಿ ಭಕ್ತಿ ಮಾಡಿ, ಇಹಪರ ಸೌಖ್ಯ ಪಡೆಯಬಹುದು.

ಏವಂ ಸ ವಿಪ್ರೋ ಭಗವತ್ಸುಹೃತ್ತದಾ
ದೃಷ್ಟ್ವಾ ಸ್ವಭೃತ್ಯೈ ರಜಿತಂ ಪರಾಜಿತಂ
ತದ್ಧ್ಯಾನ ಯೋಗೋದ್ ಗ್ರಥಿತಾತ್ಮ
ಬಂಧನ
ಸ್ತದ್ಧಾಮ ಲೇಭೇ ಅಚಿರತಃ
ಸತಾಂ ಗತಿಂ ।



## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಿಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

# ದಕ್ಷಿಣ ಕನ್ನಡ ಜಿಲ್ಲೆಯ
# ಜನಾರ್ದನ ದೇವಾಲಯಗಳು

ದೇವನು ಹಲವಾರು ತೆರೆದ ಅವತಾರಗಳನ್ನು ಕೈಗೊಂಡ ನೆಂದು ಪುರಾಣಗಳಲ್ಲಿ ಹೇಳಲಾಗಿದೆ. ಇನ್ನು ಕೆಲವು ರೂಪ ಗಳನ್ನು ಆಗಮಗಳಲ್ಲಿ ಲಾಕ್ಷಣಿಕಗಳಾಗಿ ರೂಪಿಸಲಾಗಿದೆ. ಆ ಲಕ್ಷಣಾನುಸಾರ ನಿರ್ಮಿಸಿದ ಮೂರ್ತಿಗಳು ವಿಧವಿಧ ವಾಗಿವೆ. ವಿಷ್ಣುರುದ್ರ ಶಕ್ತಿಗಳೆಂಬ ಹೆಸರಿನ ಹಲವಾರು ಹೇಳಿವೆ. (ಪಾಂಚರಾತ್ರ, ವೈಖಾನಸಾಗಮ ಇತ್ಯಾದಿಗಳಲ್ಲಿ ಆ ವಿವರಗಳಿವೆ) ಶಂಖ ಚಕ್ರ ಗದಾ ಪದ್ಮಗಳು ಬೇರೆ ಬೇರೆ ಕೈಗಳಲ್ಲಿರುವಂತೆ ಇಪ್ಪತ್ತನಾಲ್ಕು ಮೂರ್ತಿಗಳಾ ಗುತ್ತವೆ. ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮನಾಭ, ದಾಮೋದರ, ಸಂಕರ್ಷಣ, ವಾಸು ದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಕೃಷ್ಣಗಳೆಂಬ ಇಪ್ಪತ್ತನಾಲ್ಕು ಮೂರ್ತಿಗಳು ಅವು. (ಅಗ್ನಿ ಪುರಾಣದಲ್ಲಿ ಇದರ ಲಕ್ಷಣ ವಿಸ್ತಾರವಾಗಿದೆ. ಮಧ್ವಾಚಾರ್ಯರ ತಂತ್ರಸಾರದಲ್ಲೂ, ವಾದಿರಾಜ ರಚಿತ ಸ್ತೋತ್ರದಲ್ಲೂ ಇವುಗಳ ಬಗೆಗಳಿವೆ.) ಆದರೆ ಇವುಗಳಲ್ಲಿ ಕೆಲವು ಮೂರ್ತಿಗಳ ಬಳಕೆಯಿರುತ್ತದೆ. ಕೆಲವು ನಾಮ ಸಾದೃಶ್ಯಗಳಾಗಿವೆ. (ವಾಮನ, ಉಪೇಂದ್ರ) ಇವು ಪ್ರತ್ಯೇಕ ಗಳೇ ಇವೆ.

ಕನ್ನಡದ ಕರಾವಳಿಜಿಲ್ಲೆಯಾದ ದಕ್ಷಿಣ ಕನ್ನಡದಲ್ಲಿ ಜನಾರ್ದನ ಮೂರ್ತಿಯಿರುವ ದೇವಾಲಯಗಳಿವೆ. (ಕೆಲವೆಡೆ ವಿಷ್ಣುದೇವಾಲಯವೆಂದು ಹೊರಗೆ ಹೆಸರಿಸುವರಾದರೂ ಒಳಗಡೆ ಜನಾರ್ದನ ವಿಗ್ರಹವಿದೆ.) ಈ ದೇವಾಲಯ ಗಳನ್ನು ಏಕಕಾಲದಲ್ಲಿ ನಿರ್ಮಿಸಲಾಗಿಲ್ಲ. ಇಲ್ಲಿರುವ ಮೂರ್ತಿ ಗಳ ಉದ್ದಗಲವೂ ಏಕಪ್ರಕಾರವಾಗಿಲ್ಲ. ಶಿಲೆ, ಲೋಹಾದಿ ಗಳಿಂದ ಕೆಲವೆಡೆ ತಯಾರಿಸಿದವೂ ಇಲ್ಲಿವೆ.

ಸಾಬ್ಜಾರಿ : ಸಜನಾರ್ದನೋಽಸ್ತು

ಸದಂಬ : ಶಂಖೀ ಗದಾ ಮೇ ಸದಾ

ಎಂದು ವಾದಿರಾಜರ ಉಕ್ತಿಯಂತೆ ದೇವನ ಬಲಗೈಗಳಲ್ಲಿ ಪದ್ಮ ಚಕ್ರಗಳು, ಎಡಗೈಗಳಲ್ಲಿ ಶಂಖ ಗದೆಗಳೂ ಇರು ವವನೇ ಜನಾರ್ದನಮೂರ್ತಿ. (ಕೆಲವೆಡೆಯ ವಿಗ್ರಹಗಳಲ್ಲಿ ಪದ್ಮದ ಬದಲು ಅನ್ನದ ಪಿಂಡವೂ ಹೇಳಲಾಗಿದೆ.)

ತುಳುನಾಡಿನ ಚಾರಿತ್ರಿಕ ಸಾಂಸ್ಕೃತಿಕ ಅಧ್ಯಯನವನ್ನು ನಡೆಸಿದ ಡಾ॥ ಪಾದೂರು ಗುರುರಾಜಭಟ್ಟರು ಸಂಕಲಿಸಿ ಪ್ರಕಟಿಸಿದ "ಆಂಟಿಕ್ವಿಟಿ ಆಫ್ ಸೌತ್ ಕೆನರಾ" ಕೃತಿಯಲ್ಲಿ ಹಲವೆಡೆಯ ಜನಾರ್ದನ ಮೂರ್ತಿಗಳ ಚಿತ್ರ ಹಾಗೂ ಕಾಲಮಾನಗಳನ್ನು ನಿರ್ದೇಶಿಸಿದ್ದಾರೆ. ಆ ಪರಿವೆಯಿಂದ ಇಲ್ಲಿ ಪರಿಚಯಿಸಲಾಗಿದೆ. (ಅವರು ಅಲ್ಲಿ ಹೇಳಿದ 2 ಕಡೆಯವು ಕೊನೆಗೆ ಹೇಳಿದೆ.)

ಜನಾರ್ದನ ದೇವಾಲಯಗಳೆಂದೇ ಪ್ರಸಿದ್ಧವಾದವು : 1. ಬ್ರಹ್ಮಾವರದ ಅಗ್ರಹಾರಜನಾರ್ದನ (ಕಿ. ಶ. 14ನೇ ಶತಕ) 2. ಕಾಪಿನ ಸಮೀಪದ ಕಂದಾಡಿ (ಕ್ರಿ. ಶ. 14ನೇ ಶತಕ) 3. ಕಟಪಾಡಿ ಸಮೀಪದ ಮಟ್ಟಿ (13 ನೇ ಶತಕ) 4. ಕಂದಾವರದ ಬಳೂರಿನ ಪಾಳಾದ ಗುಡಿ (ಕ್ರಿ. ಶ. 9–10 ನೇ ಶತಕ) 5. ಮೂಲ್ಕಿ ಸೀಮೆಯ ಸೀಮಂತೂರು (ಕಿ. ಶ. 13–14 ನೇ ಶತಕ) 6. ಪರ್ಡೂರಿನ ಬಳಿಯ ಇರ್ವತ್ತೂರು (ಕ್ರಿ. ಶ. 12 ನೇ ಶತಕ) 7. ಉಡುಪಿಯ ಬಳಿಯ ಬಲ್ಲಾಡಿ (ಕ್ರಿ. ಶ. 9–10ನೇ ಶತಕ) 8. ಎರ್ಮಾಳಿನ ದೇವಾಲಯ (ಕ್ರಿ. ಶ. 13 ನೇ ಶತಕ) 9. ಉಜಿರೆ (ಧರ್ಮಸ್ಥಳದ ಬಳಿ) (ಕ್ರಿ. ಶ. 14 ನೇ ಶತಕ) (ಕೆಲವೆಡೆ ಪಿಂಡಧಾರಿ ಎಂದರೆ ಪಿತೃಸಂಬಂಧಿಯೆಂದಿದೆ. ಕಾರಣ ವಿವರ ಇಲ್ಲ)

ಇತರತ್ರ : ಸರ್ವಂ ವಿಷ್ಣುಮಯಂ ಎಂಬಂತೆ ಕೆಲವೆಡೆ ಜನಾರ್ದನ ವಿಗ್ರಹಗಳಿದ್ದರೂ ಜನಾರ್ದನ ದೇವಾಲಯವೆನ್ನದೆ ಬೇರೆ ಹೆಸರಿನಿಂದ ಕರೆಯಲಾಗುತ್ತಿದೆ. ಇಂತಹ ಮೂರ್ತಿ ಲಕ್ಷಣಗಳನ್ನು ತಿಳಿಯದೆ ಹೆಸರಿಸುವರು. ಮಧ್ವಾಚಾರ್ಯರು ಉಡುಪಿಯಲ್ಲಿ ಗೋಪಿಕಾಪ್ರಣಯಿ ಯಾದ "ಶ್ರೀಪತಿ"ಯನ್ನು ಸ್ಥಾಪಿಸಿದ್ದರು ಎಂದು ಮಧ್ವ ವಿಜಯದಲ್ಲಿದೆ. ಆ ವಿಗ್ರಹಕ್ಕೆ ಕ್ರೀಡಾಯಷ್ಟಿ, ದಾಮ, ಮಕುಟತ್ರಯಗಳಿವೆ. ಬಾಲಕೃಷ್ಣನೆಂದು ವೈಖಾನಸಾಗಮ ದಲ್ಲಿದೆ. ಆದರೆ ಅದಕ್ಕೆ ವಿವಿಧಾಲಂಕಾರಗಳಂತೆ ಕ್ರೀಡಾ ಯಷ್ಟಿಯ ಬುಡದಲ್ಲಿ ಕಡೆಗೋಲಿನ ಆಕಾರವನ್ನು ಸೇರಿಸಿ ಕಡೆಗೋಲ ಕೃಷ್ಣನೆಂದೇ ಹೇಳುವರು. ವಾದಿರಾಜಸ್ವಾಮಿ ಗಳ ಕಾಲದಲ್ಲಿ ದಿನಂಪ್ರತಿ ಕೃಷ್ಣನಿಗೆ ರಾತ್ರಿಯ ಪೂಜೆಯ ವೇಳೆಯಲ್ಲಿ ವಿವಿಧಾಕಾರಗಳ ಹೊಂದಿಕೆಯಾಗುವಂತೆ ಕಲ್ಪಿ ಸಿದ್ದಾರೆ. (ಆ ಬಗ್ಗೆ ಅವರ ಕೀರ್ತನೆಯೂ ಇದೆ) ಈ ವಿಗ್ರಹದಂತೆ ಗೋವೆಯಲ್ಲೂ ನಡುಗಾಲದ ಕೃಷ್ಣವಿಗ್ರಹ ವಿರುವುದನ್ನು ಕಾಣಬಹುದು. ಮಧ್ವರು ಗೋವೆಯಿಂದ ಕೃಷ್ಣಪ್ರತಿಮೆಯನ್ನು ಹಡಗಿನಲ್ಲಿ ತರಿಸಿದರು ಎಂಬುದೂ ಸೂಕ್ತ. ಗೋವೆಯ ಕೊಂಕಣ ಬ್ರಾಹ್ಮಣರು ಉಡುಪಿಯ ಕೃಷ್ಣನಿಗೆ ಪೂಜಾದಿಗೆ ದತ್ತಿಯಿತ್ತರೆಂದು ಶಾಸನಗಳಲ್ಲಿದೆ. ಆ ಬದಲು ಉಡುಪಿಯ ಕೃಷ್ಣಮೂರ್ತಿ ದ್ವಾರಕೆಯಿಂದ ಬಂದುದೆಂದು ವರ್ಣನೆಯಲ್ಲಿದೆ.

ಇತರ ಜನಾರ್ದನ ಮೂರ್ತಿಗಳು : 1. ಅಜ್ಜೆಕಾರು ಜನಾರ್ದನ (ಕ್ರಿ.ಶ. 12 ನೇ ಶತಕ) 2. ಬ್ರಹ್ಮಾರದ ಬಳಿ ಹುಂದಾಡಿಯಲ್ಲಿ (ಕ್ರಿ.ಶ. 15ನೇ ಶತಕ) 3. ಪೇರಂಬಳ್ಳಿಯಲ್ಲಿ (ಕ್ರಿ.ಶ. 8–9ನೇ ಶತಕ) 4. ಉಡುಪಿಯ ಬಳಿ ಕೆಮ್ಮಣ್ಣಿನಲ್ಲಿ (ಕ್ರಿ. ಶ. 12 ನೇ ಶತಕ) 5. ಕಾಪು ಸಮೀಪದ ಮಜೂರಿ ನಲ್ಲಿ (ಕ್ರಿ. ಶ. 13 ಶತಕ) 6. ಇನ್ನಂಜೆಯ ಬಳಿ ಉಂಡಾರು (ಕ್ರಿ. ಶ. 12 ನೇ ಶತಕ) 7. ಮಂಗಳೂರು ತಾಲೂಕಿನ ಕುಳಾಯಿಯಲ್ಲಿ (ಕ್ರಿ. ಶ. 13 ನೇ ಶತಕ) 8. ನವಮಂಗಳೂರು ಬಂದರದ ಪಣಂಬುದೂರಲ್ಲಿ (ಕ್ರಿ. ಶ. 13 ನೇ ಶತಕ) (ಇವೆರಡೂ ಪುಸ್ತಕದಲ್ಲಿಲ್ಲ. ಅವರೇ ಬರೆದ ಆಮೇಲೆ ಪ್ರಕಟವಾದ ಗ್ರಂಥದಲ್ಲಿವೆ)

ಪಣಿಯೂರಿನಲ್ಲಿ ನಂದ ಹೆಗ್ಗಡೆ ಸ್ಥಾಪಿಸಿದನೆನ್ನಲಾಗುವ "ನಂದಿಕೇಶ್ವರ" (ನಂದನೇಶ್ವರ) ದೇವಾಲಯವಿದೆ. ಅಲ್ಲಿಯ ಗಣಪತಿಯ ಪ್ರಾಚೀನ ವಿಗ್ರಹವು ಆನೆಯ ಮೇಲೆ ಕುಳಿತಿದೆ. (ಬಸರೂರಿನಲ್ಲೂ ಇಂತಹ ವಿಗ್ರಹವಿದೆ) ಈ ದೇವಳದ ಪಡುಕಿನಾರೆಯಲ್ಲಿ ಈ ಮೇಲಿಂದ ವಿಷ್ಣು ಮೂರ್ತಿಯ ದೇವಾಲಯದಲ್ಲಿ ಜನಾರ್ದನ ಮೂರ್ತಿಯಿದೆ. ಈ ಗ್ರಾಮವು ಅಗ್ರಹಾರವಾಗಿತ್ತು. (ಡಾ॥ ಪಿ. ಜಿ. ಭಟ್ ಹೇಳಿದಂತೆ). ಕೇಶವಾದಿ 24 ಮೂರ್ತಿಗಳಲ್ಲಿ ಕೆಲವು ಮೂರ್ತಿಗಳು ಲಭ್ಯವಾಗಿವೆ. ಹಲವಾರು ದೇವಾಲಯ, ಮಠ–ಮನೆಗಳಲ್ಲಿ ಅವು ಪೂಜೆಗೊಳ್ಳುತ್ತಲಿವೆ. ಅವುಗಳಲ್ಲಿನ ಜನಾರ್ದನ ವಿಗ್ರಹ ಆಸ್ತಿಕರ ಗಮನಕ್ಕೆ ಹೆಚ್ಚು ಪಾತ್ರ ವಾಗಿದೆ. ★

**ವಿದ್ವಾನ್ ಕೆ. ವೆಂಕಟರಾಯಾಚಾರ್ಯ**

ದುಷ್ಟರಾಗಿದ್ದ ಖಳರ ಸಮುದಾಯವ
ಮರ್ದನ ಮಾಡಿದ ಮಹಮಹಿಮ ಕೋಲೆ !
ಮರ್ದನ ಮಾಡಿದ ಮಹಮಹಿಮನಾದ ಜ–
ನಾರ್ದನ್ನ ಮೊದಲೆ ಬಲಗೊಂಬೆ ಕೋಲೆ !

# ತಿರುಮಲೆ ತಿರುಪತಿ ದೇವಸ್ಥಾನಗಳು.

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 12.5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ. ರೂ 10 ಲಕ್ಷ ನೀಡಿದಲ್ಲಿ ಇನ್ನು ಮುಂದೆ ಪ್ರತಿದಿನ 400 ಮಂದಿಗೆ ಮಾತ್ರ ಉಚಿತ ಭೋಜನ ನೀಡಲಾಗುವುದು.

* ಈಗಾಗಲೇ ರೂ 10 ಲಕ್ಷ ದತ್ತಿ ನೀಡಿರುವವರ ಹೆಸರಿನಲ್ಲಿ ಪ್ರತಿದಿನ 500 ಮಂದಿಗೆ ಭೋಜನ ವ್ಯವಸ್ಥೆ ಮಾಡಲಾಗುವುದು. (ಉಳಿಕೆ ಹಣ ತಿ.ತಿ.ದೇ. ನಿಧಿಯಿಂದ ಹಾಕಲಾಗುತ್ತದೆ).

* ದತ್ತಿಯನ್ನು ವ್ಯಕ್ತಿ, ಸಂಸ್ಲೆ, ಸಂಘಗಳು ನೀಡಬಹುದು.

* ಊಟದ-ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವಂಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.

* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.

* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.

* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಶಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್, ಬೊಂಬಾಯಿ) | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ**

**ತಿ. ತಿ. ದೇವಸ್ಥಾನಗಳು**

**ತಿರುಪತಿ–೫೧೭೫೦೧ ಆಂ.ಪ್ರ.**

**ಕಾರ್ಯನಿರ್ವಹಣಾಧಿಕಾರಿ**

# ಭಾರತೀಯ ನೃತ್ಯ

ಸಂಗೀತದಂತೆ ನಾಟ್ಯವೂ ಬಹು ಪ್ರಾಚೀನ ಕಾಲದಿಂದ ವೈಭವಯುತವಾಗಿ ಬೆಳೆದು ಬಂದಿದೆ ವಾಸ್ತವವಾಗಿ ಹೇಳುವುದಾದರೆ ನೃತ್ಯವೂ ಸಂಗೀತದ ಒಂದು ಭಾಗವೇ. 'ಗೀತಂ ವಾದ್ಯಂ ತಥಾ ನೃತ್ಯಂ ತ್ರಯಂ ಸಂಗೀತ ಮುಚ್ಯತೇ'– ಸಂಗೀತದ ಶಾಸ್ತ್ರೀಯ ವಿವರಣೆ. ಸಂಗೀತಕ್ಕೆ ನೃತ್ಯವಾದ್ಯಗಳು ಅವಶ್ಯಕ ಸಾಧನಗಳು.

ಬೇರೊಂದು ರೀತಿಯಲ್ಲಿ ಹೇಳುವುದಾದರೆ ನಾಟ್ಯಕಲೆಯು ಎಲ್ಲ ಕಲೆಗಳಿಗೆ ತಳಪಾಯ. ಅದನ್ನು ಸಂಗೀತ ಜ್ಞಾನವಿಲ್ಲದೆ ಅರ್ಥಮಾಡಿ ಕೊಳ್ಳಲಾಗುವುದಿಲ್ಲ. ಸಂಗೀತವು ಭಾವಗಳನ್ನು ಉದ್ದೀಪನಗೊಳಿಸುತ್ತದೆ. ಹಾಗೆ ಉದ್ದೀಪಿಸಿದ ಭಾವಗಳನ್ನು ನೃತ್ಯವು ಅಂಗಾಂಗಗಳಲ್ಲಿ ಮನೋಹರವಾಗಿ ಅಭಿವ್ಯಕ್ತಿಸುತ್ತದೆ. ಅದುದರಿಂದ ಸೌಂದರ್ಯ ಮತ್ತು ಧ್ವನಿಯ ಸಮ್ಮೇಳನ ನೃತ್ಯಕಲೆಯಲ್ಲಲ್ಲದೆ ಬೇರಾವ ಕಲೆಯಲ್ಲಿಯೂ ಅಷ್ಟು ಸಮಂಜಸವಾಗಿ ಮಿಲನವಾಗಿರುವುದಿಲ್ಲ.

ನೃತ್ಯ ವಿಚಾರವನ್ನು ಸಮಗ್ರವಾಗಿ ತಿಳಿಸುವ ಶಾಸ್ತ್ರವೇ ಭರತಶಾಸ್ತ್ರ. ಈ ಶಾಸ್ತ್ರಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರರೇ ಅಧಿದೇವತೆಗಳು. ಇದು ಭಾವ (ಭ) ರಸ (ರ) ತಾಳ (ತ) ಬೋಧಾತ್ಮಕವಾಗಿರುವುದರಿಂದ ಇದಕ್ಕೆ ಭರತಶಾಸ್ತ್ರವೆಂದು ಹೆಸರು ಬಂದಿತೆಂಬುದು ಮತ್ತೆ ಕೆಲವರ ಅಭಿಪ್ರಾಯ. ಭರತನ 'ನಾಟ್ಯಶಾಸ್ತ್ರ'ದ ಕಾಲದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಅದು ಕ್ರಿ. ಪೂ. ೪ ನೆಯ ಶತಮಾನದಿಂದ ಕ್ರಿ. ಶ. ೪ ನೆಯ ಶತಮಾನದವರೆಗೆ ತೂಗಾಡುತ್ತಿದ್ದೆ ಸುಮಾರು ಕ್ರಿ. ಶ. ೪ ನೆಯ ಶತಮಾನದಲ್ಲಿ ರಚಿತವಾಗಿದ್ದಿರಬಹುದು.

ಭರತಶಾಸ್ತ್ರಕ್ಕೆ ಅಭಿನಯಶಾಸ್ತ್ರವೆಂಬ ಮತ್ತೊಂದು ಹೆಸರೂ ಉಂಟು. ಇದರಲ್ಲಿ ಪ್ರತಿಪಾದಿಸುವ ನೃತ್ಯವನ್ನು ಬಿಟ್ಟು, ಉಳಿದ ನೃತ್ಯ ನಾಟಕಗಳು ಅನುಕರಣಾತ್ಮಕವಾಗಿರುವುದರಿಂದ ಅಭಿನಯಾಶ್ರಿತವಾಗಿವೆ. ಅಭಿನಯವು ಭಾಷೆಯಂತೆಯೇ ಮನುಷ್ಯನ ಮನೋಭಾವ ಮತ್ತು ಅನುಭವಗಳನ್ನು ಇತರರಿಗೆ ತಿಳಿಯಪಡಿಸುವ ಸಾಧನ. ಅಂಗೋಪಾಂಗಗಳ ಮೂಲಕ ಭಾವಗಳನ್ನು ಪ್ರೇಕ್ಷಕರಲ್ಲಿ ಉತ್ಪಾದನೆ ಮಾಡಿ ಆಹ್ಲಾದವನ್ನುಂಟು ಮಾಡುವುದು ಅಭಿನಯದ ಉದ್ದೇಶ.

ಅಭಿನಯದಲ್ಲಿ ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕ ಎಂದು ನಾಲ್ಕು ಪ್ರಕಾರಗಳಿವೆ. ಭಾವಕ್ಕೆ ತಕ್ಕಂತೆ ಮಾತನಾಡುವುದು ವಾಚಿಕ. ಕಾರ್ಯಕ್ಕೆ ತಕ್ಕಂತೆ ತಲೆ, ಕೈಕಾಲು, ಎದೆ, ಕಣ್ಣು, ನಡು ಮೊದಲಾದುವುಗಳನ್ನು ಆಡಿಸುವುದು ಆಂಗಿಕ, ಉತ್ತಮ ಮಧ್ಯಮಾಧಮವಾದ ಪ್ರಕೃತ್ಯಾದಿ ಔಚಿತ್ಯಾನುಗುಣವಾಗಿ ಸ್ವರಭೇದಾವಸ್ಥೆಯನ್ನು ಭಾವವನ್ನೂ ಪ್ರದರ್ಶಿಸುವುದು ಸಾತ್ತ್ವಿಕ. ವರ್ಣಭೂಷಣಾದಿಗಳಿಂದ ಶರೀರವನ್ನು ಸಮಯಕ್ಕೆ ತಕ್ಕಂತೆ ಅಲಂಕರಿಸಿ ಕೊಳ್ಳುವುದು ಆಹಾರ್ಯ.

ಭಾವತಾಳಲಯ ಯುಕ್ತವಾದ ಅಭಿನಯವೇ ನೃತ್ಯ. ಕೇವಲ ಆಂಗಿಕಾಭಿನಯ ಮಾತ್ರ. ಏಕ ವ್ಯಕ್ತಿಯು ಕಥೆಯ ಒಂದು ಭಾಗವನ್ನು ಪ್ರೇಕ್ಷಕರಿಗೆ ಅಭಿಪ್ರಾಯವಾಗುವಂತೆ ತಾಳಲಯಗಳಿಗುಣವಾಗಿ ತಲೆಕೈಕಾಲು ಮೊದಲಾದುವುಗಳನ್ನು ಸುಕುಮಾರವಾಗಿ ವಿನ್ಯಾಸಮಾಡುವುದರ ಮೂಲಕ ಅಭಿನಯಿಸುವುದೇ ನೃತ್ಯ. ಇದರಲ್ಲಿ ವಾಕ್ಯಾರ್ಥಾಭಿನಯವಿಲ್ಲ; ಪದಾರ್ಥಾಭಿನಯ ಮಾತ್ರ.

'ನಾಟ್ಯಶಾಸ್ತ್ರ', 'ಅಭಿನಯದರ್ಪಣ', 'ಸಂಗೀತ ರತ್ನಾಕರ'ದ 2 ನೆಯ ಪ್ರಕರಣ, ಚತುರ ದಾಮೋದರ ಕೃತ 'ಸಂಗೀತದರ್ಪಣದ' ನೃತ್ಯಾಧ್ಯಾಯ, ಕನ್ನಡದ 'ಲಾಸ್ಯರಂಜನ',–ಇವು ನೃತ್ಯ ವಿಷಯಕವಾದ ಗ್ರಂಥಗಳು. 'ವಿಷ್ಣುಧರ್ಮೋತ್ತರ ಪುರಾಣ', 'ಮಾನಸೋಲ್ಲಾಸ', ಮತ್ತು ಶಿವತತ್ತ್ವ ರತ್ನಾಕರ' – ಮೊದಲಾದುವುಗಳಲ್ಲಿಯೂ ಪ್ರಾಸಂಗಿಕವಾಗಿ ನಾಟ್ಯಶಾಸ್ತ್ರ ವಿಷಯಗಳು ವರ್ಣಿತವಾಗಿವೆ. ಷಟ್ಪದಿಯಲ್ಲಿ ರಚಿತವಾಗಿರುವ 'ಲಾಸ್ಯಮಕರಂದ' ವೆಂಬುದೂ, ಕಂದಪದ್ಯಗಳಲ್ಲಿ ರಚಿತವಾಗಿರುವ 'ಹಸ್ತಾಭಿನಯ ನಿಘಂಟು' ಈಚೆಗೆ ಉಪಲಬ್ಧವಾಗಿವೆ. ಅನೇಕ ಸಂಗೀತ ಶಾಸ್ತ್ರ ವಿಷಯಕವಾದ ಗ್ರಂಥಗಳಲ್ಲಿ ನಾಟ್ಯ ವಿಷಯಕವಾದ ಭಾಗಗಳೂ ಇರುತ್ತವೆ.

ನೃತ್ಯದಲ್ಲಿ ತಾಂಡವ ಮತ್ತು ಲಾಸ್ಯ ಎಂದು ಎರಡು ವಿಧ. ಉದ್ಧತ ನೃತ್ಯವೇ ತಾಂಡವ, ಸುಕುಮಾರ ನೃತ್ಯವೇ ಲಾಸ್ಯ. ತಾಂಡವಕ್ಕೆ ಪುರುಷರೂ ಲಾಸ್ಯಕ್ಕೆ ಸ್ತ್ರೀಯರೂ ಅಧಿಕಾರಿಗಳು. ನಂದಿಕೇಶ್ವರನ 'ಭರತಾರ್ಣವ'ದಲ್ಲಿ ಏಳು ವಿಧ ತಾಂಡವ ಮತ್ತು ಏಳು ವಿಧ ಲಾಸ್ಯಗಳ ಉಲ್ಲೇಖವಿದೆ.

**ಡಾ॥ ಎನ್. ಅನಂತರಂಗಾಚಾರ್**

ಭಾವಾಭಿನಯವಿಲ್ಲದುದೇ ನೃತ್ತ. ಇದರಲ್ಲಿ ಅನುಕರಣ ಪ್ರವೃತ್ತಿ ಇಲ್ಲ. ಗೀತಾರ್ಥಕ್ಕೆ ಸಂಬಂಧವಿಲ್ಲ. ಕೇವಲ ತಾಳಲಯಾಶ್ರಿತ ಕರಣಾಂಗಹಾರ ಪ್ರಯೋಗಗಳಿಂದ ಸಭ್ಯರನ್ನು ಸಂತೋಷಗೊಳಿಸುವುದೇ ಅದರ ಉದ್ದೇಶ.

ನೃತ್ಯಾಭ್ಯಾಸದಲ್ಲಿ ಪ್ರಚಲಿತವಾಗಿರುವ 'ಅಡವು'ಗಳು ನೃತ್ತವರ್ಗಕ್ಕೆ ಸೇರಿದುವು. ಇದರಲ್ಲಿ ಪರಸ್ಪರ ಒಪ್ಪುವಂತೆ ತಲೆ, ಕೈ, ಕಾಲು, ಕಣ್ಣು ಮುಂತಾದವುಗಳ ಚಲನವಿದೆ. ಪ್ರತಿಯೊಂದು ಅಡವಿನಲ್ಲೂ ಮುಖ್ಯವಾಗಿ ಒಂದು ಸ್ಥಾನಕ ಒಂದು ಚಾರಿ ಮತ್ತು ನೃತ್ತಹಸ್ತದ ಅಭಿನಯವಿರುತ್ತದೆ. ಅಡವುಗಳಿಗೂ ಕರಣಗಳಿಗೂ ಸಾದೃಶ್ಯವಿರುವುದರಿಂದ ಅಡವುಗಳ ರಚನೆಗೆ ಕರಣಗಳೇ ಮೂಲವೆನ್ನಬಹುದು. ಈ ಅಡವುಗಳ ಜೋಡಣೆಯೇ ಅಲರಿಪು, ಜತಿ, ಸ್ವರ, ಮತ್ತು ತಿಲ್ಲಾನ. ಇವು ನೃತ್ತ ಪ್ರಭೇದಕ್ಕೆ ಸೇರಿದುವು. ನೃತ್ತಕ್ಕೆ ಪೀಠಿಕಾ ಪ್ರಕರಣವೇ ಅಲರಿಪು, ವಿವಿಧ ರಾಗಗಳಲ್ಲಿ ರಚಿಸುವ ಸ್ವರಸಂಯೋಜನೆಯೇ ಜತಿಸ್ವರ, ಪದವಿನ್ಯಾಸ ಮತ್ತು ಭಂಗಿಗಳಿಂದ ನೃತ್ತ ಪ್ರದರ್ಶನವನ್ನು ಮುಕ್ತಾಯ ಮಾಡುವ ಮನೋಹರವಾದ ರಚನಾವಿಶೇಷವೇ ತಿಲ್ಲಾನ.

ಸಿಂಹಭೂಪಾಲನು ತನ್ನ 'ಲಾಸ್ಯರಂಜನೆ' ಯಲ್ಲಿ ಅಂಗ, ಪ್ರತ್ಯಂಗ, ಉಪಾಂಗೀಕರಣ, ಅಂಗಹಾರ, ಚಾರಿ, ಸ್ಥಾನಕ, ಮಂಡಲ ಮೊದಲಾದುವುಗಳ ಲಕ್ಷಣಗಳನ್ನು ವಿವರವಾಗಿ ತಿಳಿಸುತ್ತಾನೆ.

ಪಂಚಮವೇದವೆಂದು ಪ್ರಸಿದ್ಧವಾದ ನಾಟ್ಯವೇದವನ್ನು ಬ್ರಹ್ಮನು ತ್ರೇತಾಯುಗದಲ್ಲಿ ಇಂದ್ರನ ಅಪೇಕ್ಷೆಯ ಪ್ರಕಾರ ಚತುರ್ವೇದ ಸಾರವನ್ನು ಸಂಗ್ರಹಿಸಿ ನಿರ್ಮಿಸಿದನು. ಋಗ್ವೇದದಿಂದ ಶಬ್ದ, ಯಜುರ್ವೇದದಿಂದ ಅಭಿನಯ, ಸಾಮವೇದದಿಂದ ಗೀತೆ, ಅಥರ್ವಣವೇದದಿಂದ ರಸವನ್ನು ಸಂಗ್ರಹಿಸಿ ನಾಟ್ಯವೇದವನ್ನು ನಿರ್ಮಿಸಿ ಉಪದೇಶಿಸಿದನು.

ಇದರಿಂದ ಧರ್ಮಾರ್ಥಕಾಮ ಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯವು ಸಿದ್ಧಿಸುವುದು. ರಾಜರ ಕ್ಷೇಮಾಭಿವೃದ್ಧಿಯಾಗುವುದು; ದುಷ್ಟ ಕರ್ಮಗಳು ನಾಶವಾಗುವುವು; ಮನರಂಜನೆ ಯುಂಟಾಗುವುದು.

ಭರತನಾಟ್ಯವು ದಕ್ಷಿಣಭಾರತದ ಪ್ರಮುಖ ಶ್ರೇಷ್ಠ ಕಲೆ. ಸೌಂದರ್ಯ, ಗಾಂಭೀರ್ಯ, ಮಾಧುರ್ಯಗಳನ್ನು ಹೊರಪಡಿಸುವುದೇ ಅದರ ಪ್ರಾಧಾನ್ಯ ಉದ್ದೇಶ. ನಾಟ್ಯಕಲೆಗೆ ವೈಪಿನ್ಯಾಸ, ರಸಪೂರಿತ

ವಾದ ಭಾವತಾಳಲಯಬದ್ಧವಾದ ಹೆಜ್ಜೆಯ ವಿನ್ಯಾಸಗಳು ಕಲಾಂಗವಾಗಿವೆ. ನಟನಟಿಯರ ವೇಷದಾಕೃತಿಯು ವಾಹಕವಾಗುತ್ತದೆ.

ನಾಟ್ಯವು ಜನಗಳ ಮತ್ತು ದೇವತೆಗಳ ವಿಲಾಸಕ್ಕಾಗಿಯೂ ಆತ್ಮಶಾಂತಿಗಾಗಿಯೂ ಪ್ರಚಾರಕ್ಕೆ ಬಂದಿತು. ಹೃದಯದಲ್ಲಿ ಉದ್ಭವಿಸುವ ಅಂಗದ ಚಲನವಲನಗಳಿಗೂ ವಿಶೇಷಾರ್ಥವುಂಟು. ಅದು ಗೋಚರಾಗೋಚರವಾದ ಅನೇಕ ವಸ್ತುಗಳ ಪರಿಚಯವನ್ನುಂಟು ಮಾಡುತ್ತದೆ. ಮತ್ತಾವ ಸಲಕರಣೆಗಳೂ ಈ ಶುದ್ಧ ಚಿತ್ರವನ್ನು ಕೊಡಲಾರವು.

ನಾಟ್ಯವು ಕರ್ತವ್ಯನಿಷ್ಠರಿಗೆ ಕರ್ತವ್ಯತಾಭಾವವನ್ನೂ, ಪ್ರೇಮಿಗಳಿಗೆ ಅದರ ಸಫಲತೆಯನ್ನೂ ದುಷ್ಟರಿಗೆ ಸದ್ಗುಣ ಪರಿಚಯವನ್ನೂ, ಶಿಸ್ತಿನಿಂದಿದ್ದವರಿಗೆ ಸಂಯಮ ವಿಶೇಷವನ್ನೂ, ವೀರಾಧಿವೀರರಿಗೆ ಶಕ್ತಿಯನ್ನೂ, ಹೇಡಿಗಳಿಗೆ ಧೈರ್ಯವನ್ನೂ ಪಂಡಿತರಿಗೆ ಮತ್ತಷ್ಟು ಜ್ಞಾನವನ್ನೂ, ದುಃಖಿತರಿಗೆ ಸಹನಶಕ್ತಿಯನ್ನೂ, ದ್ರವ್ಯಾಪೇಕ್ಷಿಗಳಿಗೆ ದ್ರವ್ಯವನ್ನೂ ದುಷ್ಕೃತಿಷ್ಟರ ಜೀವನ ಕ್ರಮಗಳನ್ನು ಪ್ರತಿಬಿಂಬಿಸಿ ಎಲ್ಲರಿಗೂ ಮನರಂಜನೆಯನ್ನೂ ಧೈರ್ಯವನ್ನೂ ಸಂತೋಷವನ್ನೂ ಉಂಟುಮಾಡುತ್ತದೆ. ಅದಕ್ಕಾಗಿಯೇ ಕಾಳಿದಾಸನು 'ನಾಟ್ಯಂ ಭಿನ್ನರುಚೇರ್ಜನಸ್ಯ, ಬಹುಧಾಪ್ಯೇಕಂ ಸಮಾರಾಧನಂ' ಎಂದು ಹೇಳಿದುದು.

ನಾಟ್ಯಾಭಿನಯದಲ್ಲಿ ನಟನಾದವನು ತನ್ನನ್ನೇ ತಾನು ಮರೆತು ಆನಂದಾನುಭವದಲ್ಲಿ ತಲ್ಲೀನನಾಗಬೇಕು. ಶಿವನು ನಾಟ್ಯವಾಡಿದ ಅನುಭವದಿಂದ ತನ್ನನ್ನು ತಾನೇ ಮರೆತನಂತೆ. ಆದುದರಿಂದಲೇ ಅದನ್ನು ಆನಂದತಾಂಡವವೆಂದು ಕರೆಯುವುದು. ಅಭಿನೇಯಪಾತ್ರದ ತಾದಾತ್ಮ್ಯವಿದ್ದು ಪ್ರೇಕ್ಷಕರಿಗೆ ಅದೇಭಾವವುಂಟಾಗುವಂತೆ ಅಭಿನಯಿಸುವುದು ನಟನ ಪರಮಗುರಿಯಾಗಿರಬೇಕು . ನಾಟ್ಯಾಭಿನಯದಲ್ಲಿ ಏಕಾಗ್ರತೆಯೇ ಪ್ರಧಾನವಾಗಿರುವ್ಷದರಿಂದ ಇದನ್ನು ಯೋಗವೆಂದು ಕರೆಯಬಹುದು ಭರತನಾಟ್ಯವನ್ನು ಕಲಿತ ಕೆಲವು ಸ್ತ್ರೀಯರು ಇದನ್ನೇ ವಂಶಪಾರಂಪರ್ಯವಾದ ವೃತ್ತಿಯಾಗಿ ಅವಲಂಬಿಸಿ, ಆ ಕಲೆಯನ್ನು ಮುಗಿಲಿಗೇರಿಸಿದರು. ಅವರಿಗೆ ದೇವಸ್ಥಾನಗಳ ಪೂಜಾಸ್ಥಾನಗಳಲ್ಲಿಯೂ ಗಣ್ಯಸ್ಥಾನವು ದೊರಕಿತು. ಅಂತಹವರನ್ನು ದೇವದಾಸಿಗಳೆಂದು ಕರೆದು ಜನತೆ ಗೌರವಿಸಿತು.

ಭಾರತದಲ್ಲಿಯೇ ಅಲ್ಲದೆ ಅನೇಕ ಪ್ರಾಚೀನ ಜನಾಂಗಗಳಲ್ಲಿ ನಾಟ್ಯಕ್ಕೆ ವಿಶೇಷ ಮಾನ್ಯತೆಯಿದೆ. ನೀಗ್ರೊ, ಎಸ್ಕಿಮೊ ಮತ್ತು ಅಮೆರಿಕಾದ ಪೂರ್ವ ನಿವಾಸಿಗಳಲ್ಲಿ ಮಾನವನ ಅಂತ್ಯಸಂಸ್ಕಾರದ ಸಂದರ್ಭದಲ್ಲಿಯೂ, ಈಜಿಪ್ಟ್ ದೇಶದಲ್ಲಿ ಗ್ರಹಗಳ ಪ್ರಭಾವವನ್ನು ವ್ಯತ್ಯಾಸ ಮಾಡುವುದರಲ್ಲಿಯೂ ನೃತ್ಯವಾಡುತ್ತಿದ್ದುದು ರೂಢಿಯಲ್ಲಿತ್ತು. ರಷ್ಯಾ ಮತ್ತು ಇಂಡೋನೇಷ್ಯಾ. ಜನಗಳಲ್ಲಿ ನೃತ್ಯಕ್ಕೆ ಇಂದಿಗೂ ಗಣ್ಯಸ್ಥಾನವಿದೆ.

ಬ್ರಹ್ಮನು ಭರತನಿಗೆ ನಾಟ್ಯವೇದವನ್ನು ಉಪದೇಶಿಸಿದನು: ಅವನು ಅದನ್ನು ತನ್ನ ನೂರು ಮಕ್ಕಳಿಗೂ, ಅಪ್ಸರೆಯರಿಗೂ, ಗಂಧರ್ವರಿಗೂ, ದೇವತೆಗಳಿಗೂ ಉಪದೇಶಿಸಿದನು. ಭರತನು ತನ್ನ ಮಕ್ಕಳೊಡಗೂಡಿ ಜಗದಾದಿಂಪತಿಗಳಾದ ಪಾರ್ವತೀಪರಮೇಶ್ವರರಿಗೆ ಅಭಿನಯಿಸಿ ತೋರಿಸಿದನು. ಅದನ್ನು ನೋಡಿ ಸಂತುಷ್ಟನಾದ ಶಿವನು ತಾನೂ ಅದರ ಪ್ರಯೋಗವನ್ನು ಸ್ಮರಿಸಿ, ತನ್ನ ಉದ್ಧತ ನೃತ್ಯವನ್ನು ತಂಡುವೆಂಬ ಮುನಿಗೆ ಉಪದೇಶಿಸಿದನು. ಅದಕ್ಕಾಗಿಯೇ ಅದಕ್ಕೆ ತಾಂಡವನೃತ್ಯವೆಂಬ ಹೆಸರಾಯಿತು. ಶಿವನ ಅಪ್ಪಣೆಯನ್ನು ಪಡೆದು ಪಾರ್ವತಿಯು ಮಧುರ ನಾಟ್ಯಕ್ರಮವನ್ನು ಭರತನಿಗೆ ಉಪದೇಶಿಸಿದಳು. ಇದು ಲೋಕದಲ್ಲಿ ಲಾಸ್ಯವೆಂಬ ಹೆಸರನ್ನು ಪಡೆಯಿತು.

ಭರತಮುನಿಯು ನಾಟ್ಯ, ನೃತ್ತ, ಮತ್ತು ನೃತ್ಯಗಳನ್ನು ಲಾಸ್ಯತಾಂಡವ ಭೇದಗಳೊಡನೆ ತನ್ನ ಮಕ್ಕಳಾದ ಕೋಹಳ, ಮತಂಗ ಮತ್ತು ದತ್ತಿಲ ಮೊದಲಾದವರಿಗೆ ಉಪದೇಶಿಸಿದನು. ಅವರು ಆ ವೇದವನ್ನು ಭೂಲೋಕದಲ್ಲಿ ಹರಡಿದರು. ಇದನ್ನು ಪಾರ್ವತಿಯು ಬಾಣಾಸುರನ ಮಗಳಾದ ಉಷೆಗೆ ಉಪದೇಶಿಸಿದಳು. ಉಷೆಯು ಗೋಪಸ್ತ್ರೀಯರಿಗೂ, ಅವರು ಸೌರಾಷ್ಟ್ರ ಸ್ತ್ರೀಯರಿಗೂ ತಿಳಿಸಿದರು. ಗಂಧರ್ವರಾಜನಾದ ಚಿತ್ರಸೇನನು ದೇವೇಂದ್ರನ ಅಪ್ಪಣೆಯಂತೆ ಅರ್ಜುನನಿಗೂ ಉಪದೇಶಿಸಿದನು. ಅವನು ವಿರಾಟ ಪುತ್ರಿಯಾದ ಉತ್ತರೆಗೆ ಉಪದೇಶಿಸಿದನು. ಈ ಪರಂಪರೆಯಿಂದ ಈ ಶಾಸ್ತ್ರವು ಭೂಲೋಕದಲ್ಲಿ ಸರ್ವವ್ಯಾಪ್ತಿಯಾಯಿತು.

ಬ್ರಹ್ಮ ಇಂದ್ರಾದಿಗಳಿಂದ ಅಭಿನಯಿಸಲ್ಪಟ್ಟ ನೃತ್ಯವು ಮಾರ್ಗ ಎನಿಸಿಕೊಳ್ಳುತ್ತದೆ. ಈ ಭೂಲೋಕದಲ್ಲಿ ಭಿನ್ನ ಭಿನ್ನ ಭಾಗಗಳಲ್ಲಿ ವಿವಿಧ ಪ್ರಕಾರವಾಗಿ ವಿಸ್ತಾರಗೊಂಡ ಅಭಿನಯಸಾರವು ದೇಶೀ ಎಂದು ಪರಿಗಣಿತವಾಗಿದೆ.

ನಾಟ್ಯವನ್ನು ನೋಡುವ ಜನರಿಗೆ ಇಷ್ಟಾರ್ಥಪ್ರಾಪ್ತಿ, ಸಂತೋಷ, ಭಾಗ್ಯ, ಸಂಪದಭಿವೃದ್ಧಿ, ಮಂಗಳ, ಕೀರ್ತಿ, ಹೃದಯಾನಂದ, ಸೌಖ್ಯ, ಕಾಂತಿ, ಹೆಮ್ಮೆ, ಮದನೋತ್ಸಾಹ, ಸದ್ಗುಣ ಮೊದಲಾದುವು ಉಂಟಾಗುತ್ತವೆ.

ವಾಕ್, ಮನಸ್, ಶರೀರ ಈ ಮೂರರಿಂದಲೂ ಉಂಟಾಗುವ ಪುರುಷಾರ್ಥಸಾಧಕವಾಗುವ ಚೇಷ್ಟಾರೂಪ ವಿಚಿತ್ರವ್ಯಾಪಾರಕ್ಕೆ ವೃತ್ತಿ ಎಂದು ಹೆಸರು. ಇದು ಭಾರತೀ, ಸಾತ್ವಕಿ, ಆರಭಟಿ ಮತ್ತು ಕೈಶಕೀ ಎಂದು ನಾಲ್ಕುವಿಧ. ವಾಗ್ವ್ಯಾಪಾರವೊಂದೇ ಪ್ರಧಾನವಾಗಿರುವುದು ಭಾರತಿ. ಹರ್ಷ, ಶೌರ್ಯ, ತ್ಯಾಗ ಮೊದಲಾದ ಸತ್ತ್ವಪ್ರಕಾಶಕ ಮನೋವ್ಯಾಪಾರವೇ ಸಾತ್ವಕೀ ವೃತ್ತಿ. ಇದರಲ್ಲಿ ವೀರ, ರೌದ್ರ, ಅದ್ಭುತಗಳು ಮುಖ್ಯವಾಗಿರುತ್ತವೆ, ಶೃಂಗಾರ, ನಿರ್ವೇದ, ಕರುಣಗಳಿಲ್ಲ

(29 ನೇ ಪುಟ ನೋಡಿ

# ಅರ್ಚಾವತಾರ ವೈಭವ

ಹಿಂದಿನ ದಾರ್ಶನಿಕರು ಬಹಳ ವರ್ಷಗಳಕಾಲ ತಪಸ್ಸು ಮಾಡಿ ತಮ್ಮ ಜ್ಞಾನ ದೃಷ್ಟಿಯಲ್ಲಿ ತಾವು ಅನುಭವಿಸಿ ಕಂಡದ್ದನ್ನು ತಮ್ಮವರಿಗೆ ವರ್ಣಿಸಿ ಹೇಳಿದರು, ಹಾಡಿದರು, ಕುಣಿದರು. ಅದನ್ನು ಕೇಳಿದ ಶಿಷ್ಯರೂ, ಭಕ್ತರೂ ತಮಗೆ ಮನ ಬಂದಂತೆ ಆನಂದಿಸಿ ಅದಕ್ಕೆ ಒಂದು ರೂಪ ಕೊಟ್ಟು ಮೂರ್ತೀಭವಿಸಿದರು. ಅಷ್ಟಕ್ಕೇ ತೃಪ್ತಿ ಇಲ್ಲದೆ ಮೂರ್ತಿಗಳಿಗೆ ಉಡಿಗೆ ಉಡಿಸಿ ತೊಡಿಗೆ ತೊಡಿಸಿ ನೋಡಿನಲಿದರು. ಅಲ್ಲಿಗೇ ತೃಪ್ತರಾಗದೆ ಆಭರಣಗಳಿಂದ ಅಲಂಕರಿಸಿದರು, ಪುಷ್ಪಗಳಿಂದ ಶೋಭಿಸುವಂತೆ ಮಾಡಿದರು, ಮಂದಿರಗಳನ್ನೂ ಪ್ರಾಕಾರಗಳನ್ನೂ ಗೋಪುರಗಳನ್ನೂ ಕಟ್ಟಿಸಿದರು. ಮಂದಿರಗಳಲ್ಲಿ ನಿತ್ಯಗಟ್ಟಲೆ ಪೂಜೆ ಪುರಸ್ಕಾರಗಳನ್ನು ನಡೆಸಲು ಅಪಾರ ವೆಚ್ಚಕ್ಕೆಂದು ಗ್ರಾಮಗಳನ್ನು ನಿವೇದಿಸಿದರು, ಹೀಗಾಯಿತು ಅರ್ಚಾವತಾರ

ತಮ್ಮ ಇಷ್ಟದೇವತೆಯನ್ನು ಒಂದು ಮೂರ್ತಿಯ ರೂಪದಲ್ಲಾಗಲಿ, ಪಟದ ರೂಪದಲ್ಲಾಗಲಿ ಅಥವ ಯಾವುದೇ ಒಂದು ನಿರಾಕಾರವಾದ ವಸ್ತುವಿನ ರೂಪದಲ್ಲಾಗಲಿ ಪೂಜಿಸುವುದು ಹಿಂದುಗಳಲ್ಲಿ ಬಹುಪುರಾತನ ಕಾಲದಿಂದಲೂ ಅನುಷ್ಠಾನದಲ್ಲಿರುವ ಅಭ್ಯಾಸ, ಸಾಲಿಗ್ರಾಮ ರೂಪದಲ್ಲಿರುವ ದೇವರನ್ನು ಅನೇಕರ ಮನೆಗಳಲ್ಲಿಟ್ಟು ಪೂಜಿಸುವುದು ವಾಡಿಕೆ. ಇದನ್ನು ಈಗಲೂ ಕೆಲವರ ಮನೆಗಳಲ್ಲಿ ನೋಡಬಹುದು. ಹಾಗೆಯೇ ದೇವತಾಮೂರ್ತಿಗಳನ್ನು ಶಿಲೆಯಲ್ಲಾಗಲಿ ಲೋಹದಿಂದಾಗಲಿ ನಿರ್ಮಿಸಿ ದೇವಾಲಯಗಳಲ್ಲಿ ಪ್ರತಿಷ್ಠೆ ಮಾಡಿ ಪೂಜಿಸುತ್ತಾರೆ. ಅನೇಕರು ತಮಗೆ ಇಷ್ಟವಿದ್ದೋ ಇಲ್ಲದೆಯೋ ದೇವಾಲಯಗಳಲ್ಲಿ ನಡೆಯುವ ಉತ್ಸವಾದಿಗಳಲ್ಲಿ ಭಾಗವಹಿಸುತ್ತಾರೆ.

ಮೂರ್ತಿ ಅಥವ ವಿಗ್ರಹಗಳಿಗೆ ಅರ್ಚಾವತಾರವೆಂದು ಶ್ರೀವೈಷ್ಣವ ಸಂಪ್ರದಾಯದಲ್ಲಿ ವಾಡಿಕೆಯಲ್ಲಿದೆ. ಈ ಅರ್ಚಾವತಾರವು ಒಂದು ಮಿತಿಗೆ ಒಳಪಟ್ಟಿರುವ ದೈವ; ದೇವರು ತನ್ನ ಭಕ್ತಕ್ಷೇಮಕ್ಕೋಸ್ಕರ ಅರ್ಚಾವತಾರ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ತನ್ನ ಭಕ್ತರಿಗೆ ಬೇಕಾಗುವ ರೂಪದಲ್ಲಿ ಬಂದು ಕಾಣಿಸಿಕೊಂಡು, ಅವರವರ ಮನೋಭೀಷ್ಟಗಳನ್ನು ನೇರವೇರಿಸುತ್ತಾನೆ. ಅವರವರ ಮನೋಭಿಲಾಷೆಗಳನ್ನು ನೆರವೇರಿಸಿ ಅವರಿಗೆ ಬೇಕಾಗುವ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ನಾನಾರೂಪಗಳಲ್ಲಿ ಕಾಣಿಸಿಕೊಳ್ಳುವ ಭಗವಂತನು ತನ್ನ ಭಕ್ತರಿಗೆ ತೃಪ್ತಿಯಾಗುವ ರೀತಿಯಲ್ಲಿ ಅವರ ಅಂತರಂಗದಲ್ಲಿ ಮೂಡುತ್ತಾನೆ, "ಚಕ್ರಪಾಣಿಯಾದ ನಾರಾಯಣ ಪ್ರಭುವು ತನ್ನ ಭಕ್ತನು ಬಯಸುವ ರೂಪದಲ್ಲಿ ದರ್ಶನವಿತ್ತು ಕಾಪಾಡುತ್ತಾನೆ." ಎಂದು ಪೊಯ್‌ಗೈ ಆಳ್ವಾರರು ರಚಿಸಿ ಹಾಡಿರುವ ಪದ್ಯಗಳಲ್ಲಿದೆ.

ಮೂರ್ತಿಗಳನು ನಾನಾವಿಧವಾದ ಪದಾರ್ಥಗಳಿಂದ ಮಾಡುತ್ತಾರೆ. ಶಿಲೆ, ಲೋಹ, ಮಣ್ಣು ಮತ್ತು ಮರ ಈ ಪದಾರ್ಥಗಳಿಂದ ಮಾಡಿದ ವಿಗ್ರಹಗಳನ್ನು ನಾವು ಸಾಮಾನ್ಯವಾಗಿ ನೋಡುತ್ತೇವೆ. ಹೀಗೆ ಮಾಡಿದ ವಿಗ್ರಹಗಳನ್ನು ಆಗಮ ಶಾಸ್ತ್ರ ಪ್ರಕಾರ ದೇವಾಲಯಗಳಲ್ಲಿ ಪ್ರತಿಷ್ಠಿಸಿ ಅದರೊಳಗೆ ದೈವ ಬಲವನ್ನು ಆವಾಹಿಸಿ ಪೂಜೆ ಮಾಡುತ್ತಾರೆ. ದೇವಾಲಯಗಳಲ್ಲಿರುವ ವಿಗ್ರಹಗಳು ಮೂಲವಿಗ್ರಹ, ಉತ್ಸವ ವಿಗ್ರಹಗಳೆಂದು ಎರಡು ವಿಧ, ಅರ್ಚಾವತಾರದಲ್ಲಿಯ ದೇವರನ್ನು ಪೂಜಿಸುವುದು ಅತ್ಯಂತ ಸುಲಭ ಸಾಧ್ಯವಾದ ಪೂಜೆ. ಈ ರೀತಿಯಲ್ಲಿಯೇ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವೆಂದು ಆಳ್ವಾರರುಗಳು ಹೇಳಿದ್ದಾರೆ. ಅವರು ಹಾಡಿರುವ ಪ್ರಬಂಧಗಳಲ್ಲಿ ಅನೇಕ ಕ್ಷೇತ್ರಗಳಲ್ಲಿಯ ಮೂರ್ತಿಗಳನ್ನು ವರ್ಣಿಸಿದ್ದಾರೆ, ಅದೂ ಅಲ್ಲದೆ ಆಳ್ವಾರರುಗಳು ಈ ಕ್ಷೇತ್ರಗಳಲ್ಲಿಯ ದೇಗುಲಗಳಿಗೆ ಸಂದರ್ಶನವಿತ್ತು, ಮೂರ್ತಿಗಳನ್ನು ವರ್ಣಿಸಿ ಹಾಡಿರುವ ಕ್ಷೇತ್ರಗಳು ಮಹಿಮಾನ್ವಿತವಾದವುಗಳೆಂದು ವಾಡಿಕೆಯಲ್ಲಿದೆ. ಈ ಕ್ಷೇತ್ರಗಳೇ ಪುಣ್ಯಧಾಮಗಳೆಂದು ಪ್ರಸಿದ್ಧಿಯಾಗಿದ್ದು ಯಾತ್ರಿಕರು ಹಿಂಡು ಹಿಂಡಾಗಿ ಈ ಕ್ಷೇತ್ರದರ್ಶನಕ್ಕೆಂದು ಹೋಗುತ್ತಾರೆ. ಪೊಯ್‌ಗೈಯ್ ಆಳ್ವಾರರು ರಚಿಸಿರುವ ಮೊದಲ ತಿರುವಂದಾದಿಯಲ್ಲಿ ತಿರುಪತಿ ವೆಂಕಟೇಶ್ವರನನ್ನೂ, ಕುಂಭಕೋಣದ ಬಳಿ ಇರುವ ಉಪ್ಪಲಿಯಪ್ಪನ್ ಅವರನ್ನೂ ಕಾಂಚಿಪುರದ ಬಳಿ ಇರುವ ಯಥೋತ್ಕಾರಿ ಸ್ವಾಮಿಯನ್ನೂ ಹೊಗಳಿ ಹಾಡಿದ್ದಾರೆ. "ತಿರುಮಳಿಶೈ ಆಳ್ವಾರರು ಕುಂಭಕೋಣಂ ಪ್ರಾಂತದ ದೇವರನ್ನು ಮಲಗಿರುವಂತೆಯೂ ವರ್ಣಿಸಿದ್ದಾರೆ, ಹೀಗೆ ಆಳ್ವಾರರುಗಳು ಹಾಡಿರುವ ಪದ್ಯಗಳಲ್ಲಿ ದೇವಾಲಯಗಳಲ್ಲಿ ನಡೆಯಬಹುದಾದ ರಥೋತ್ಸವಾದಿ ಕೈಂಕರ್ಯಗಳನ್ನು ವರ್ಣಿಸಿ ಹಾಡಿದ್ದಾರೆ. ಆಗಮ ಶಾಸ್ತ್ರಗಳು ದೇವಾಲಯಗಳಲ್ಲಿ ನಡೆಯಬೇಕಾದ ಉತ್ಸವಗಳ ವಿಧಾನವನ್ನು ನಿರೂಪಿಸಿರುವಂತೆ ಕಾಣುತ್ತದೆ." ಆದ್ದರಿಂದ ಆಳ್ವಾರರು ಮತ್ತು ಜನಗಳು ದೇವರ ಅರ್ಚಾಮೂರ್ತಿಯನ್ನು ಪೂಜಿಸುತ್ತಿದ್ದುದು ಸರ್ವಸಾಮಾನ್ಯವಾದ ವಿಷಯ. ಅರ್ಚಾವತಾರದ ಪೂಜೆ ಅವರವರು ಮಾಡಿದ ಪಾಪ ಪರಿಹಾರಕ್ಕೆ

ಶ್ರೀ ಕೆ. ಎನ್. ಮುತ್ತುರಾಜು

ಮಾಡುತ್ತಿದ್ದುವಾಗಿ ರೂಪಿತವಾಗಿದೆ. ಅವರವ ಮನೋಭೀಷ್ಟಗಳು ಫಲಿಸಿವೆ ಎಂತಲೂ ಪ್ರತೀತಿ ಅಲ್ಲದೆ ಅರ್ಚಾಮೂರ್ತಿಯ ದರ್ಶನ ಮಾತ್ರ ದಿಂದಲೇ ಅನೇಕ ಮನೋವೃತ್ತಿಗಳೂ ಬದಲಾಯಿಸಲ್ಪಡುತ್ತವೆ. ಪುರಾಣಗಳ ಕಾಲದಲ್ಲಿಯು ಈ ಅರ್ಚಾಮೂರ್ತಿಯ ಆರಾಧನೆ ಇರುವುದ ಮಹಾಭಾರತದಲ್ಲಿಯೂ ನೋಡಬಹುದು ಏಕಲವ್ಯನಿಗೆ ದ್ರೋಣಾಚಾರ್ಯರಲ್ಲಿ ಧನ ರ್ವಿದ್ಯೆಯು ಲಭಿಸಲಿಲ್ಲವಾಗಿ ದ್ರೋಣರನ್ ತನ್ನ ಗುರುವನ್ನಾಗಿ ಮಾಡಿ ಏಕಲವ್ಯನ ಧನುರ್ವಿದ್ಯಾಭ್ಯಾಸಮಾಡುತ್ತಾನೆ. ಆ ವಿದ್ ಯಲ್ಲಿ ಅರ್ಜುನನನ್ನೂ ಮೀರಿಸುವ ಧನುರ್ವಿದ ಪಾರಂಗತನಾಗುವುದು ನಮ್ಮೆಲ್ಲರಿಗೂ ತಿಳಿ ವಿಷಯ. ಕೆಲವು ಶತಮಾನಗಳ ಹಿಂದೆ ಮೀರ ಎಂಬ ಓರ್ವ ಭಕ್ತಳು ಕೃಷ್ಣನ ಮೂರ್ತಿಯನ ಸದಾಕಾಲದಲ್ಲಿಯೂ ಪೂಜಿಸುತ್ತಿದ್ದಳೆಂದು ಕೇ ದ್ದೇವೆ. ಹೀಗೆ ಅರ್ಚಾಮೂರ್ತಿಯ ಪೂಜೆ ಆಳ್ವಾರ ಅವತಾರವಾಗುವುದಕ್ಕಿಂತಲೂ ಹಿಂದಿನದ ಆಳ್ವಾರರ ಅವತಾರವಾದಮೇಲೆ ಅವರು ತಮ ಪದ್ಯಗಳಲ್ಲಿ ಹಾಡಿರುವುದರ ಮೂಲಕ ಅರ್ಚಾ ತಾರದ ಮಹಿಮೆ ಮತ್ತಷ್ಟು ಹೆಚ್ಚಿದಂತಾಯಿತ ಆಳ್ವಾರರು ಅರ್ಚಾವತಾರವನ್ನು ಹೊ ಹಾಡುತ್ತಲೂ, ಅವರಿಗೆ ಪುಷ್ಪಗಳಿಂದ ಅಲಂಕ



# ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

ಅಂದವನ್ನು ನೋಡುತ್ತಲೂ ಆನಂದಪಡುತ್ತಿದ್ದುದು ಆಶ್ಚರ್ಯವೇನೂ ಅಲ್ಲ. ಪೆರಿಯಾಳ್ವಾರರು ಪುಷ್ಪ ಮಾಲೆಗಳನ್ನು ಕಟ್ಟಿ ಸ್ವಾಮಿಗೆ ಸಮರ್ಪಿಸುತ್ತಿದ್ದರೂ, ತೊಂಡರಡಿಪ್ಪೊಡಿಯಾಳ್ವಾರ್ ಅವರು ಹೂ ತೋಟ ಮತ್ತು ತುಳಸಿ ತೋಟಗಳನ್ನು ಬೆಳೆಸಿ ಅಲ್ಲಿಂದ ತಂದ ಪುಷ್ಪಗಳನ್ನು ದೇವರಿಗೆ ಸಮರ್ಪಿಸುತ್ತಿದ್ದುದೂ, ತಿರುಮಂಗೈ ಆಳ್ವಾರರು ದೇಗುಲವನ್ನು ಕಟ್ಟಿಸಿದುದೂ ಅರ್ಚಾವತಾರದ ಮಹಿಮೆಗೆ ಮೆರುಗು ಕೊಟ್ಟಂತಾಗಿದೆ. ಎಲ್ಲಾ ಆಳ್ವಾರರುಗಳೂ ಪುಣ್ಯಕ್ಷೇತ್ರಗಳಲ್ಲಿಯ ಮೂಲಸ್ಥಾನದಲ್ಲಿರುವ ಮೂರ್ತಿಗಳನ್ನು ವರ್ಣಿಸುವುದನ್ನು ಮರೆತಿಲ್ಲ. ಆಳ್ವಾರರು ಹೊಗಳಿ ಹಾಡಿರುವ ದೇಗುಲಗಳು ಬಹಳ ಶ್ರೇಷ್ಠವೆಂದೂ ಪ್ರತೀತಿ. ಒಂದು ಮಹತ್ವಪೂರ್ಣವಾದುದೆಂದು ನಂಬಿಕೆ. ಆದುದರಿಂದಲೇ ಹೊಸ ದೇಗುಲಗಳಿಗೆ ಮಠಾಧಿಪತಿಗಳನ್ನು ಆಹ್ವಾನಿಸಿ ಸನ್ಮಾನಿಸುತ್ತಾರೆ.

ಎಲ್ಲಾ ಆಳ್ವಾರರೂ ತಾವು ಸಂದರ್ಶಿಸಿದ ದೇಗುಲಗಳ ಮೂಲ ಮೂರ್ತಿಗಳನ್ನು ಹೊಗಳಿ ಹಾಡಿರುವುದನ್ನು ಇವರು ರಚಿಸಿರುವ ಪದ್ಯಗಳಲ್ಲಿ ಕಾಣಬಹುದು. ಆ ಹಾಡುಗಳನ್ನು ನೋಡಿದಲ್ಲಿ ಮೂರ್ತಿಗಳ ಮಹತ್ತ್ವವನ್ನೂ ಅರ್ಚಾವತಾರದ ವೈಭವವನ್ನೂ ತಿಳಿಯಬಹುದು. ಆಳ್ವಾರರು ಹೀಗೆ ದರ್ಶಿಸಿ ಹಾಡಿರುವುದನ್ನು ನೋಡಿ ಆನಂದಿಸಿದ ಶ್ರೀ ನಾಥಮುನಿಗಳು ಅವುಗಳನ್ನು ದೇವಾಲಯಗಳಲ್ಲಿ ಹಾಡಲು ನಿರ್ದೇಶಿಸಿದರು. ಇವರನಂತರ ಶ್ರೀ ಯಾಮುನ ಮುನಿಗಳು, ಅವರನಂತರ ಭಗವಾನ್ ಶ್ರೀ ರಾಮಾನುಜಾಚಾರ್ಯರೂ ವಿಶೇಷವಾಗಿ ದೇವಾಲಯಗಳಲ್ಲಿ ದ್ರಾವಿಡ ವೇದವನ್ನು ಪಠಿಸಲು ಒಂದು ವಿಧಾನವನ್ನು ಏರ್ಪಡಿಸಿದರು.

ರಾಮಾನುಜರಿಗೆ ಅರ್ಚಾವತಾರದಲ್ಲಿ ಅಪಾರವಾದ ನಂಬಿಕೆ. ಈ ನಂಬಿಕೆ ರಾಮಾನುಜರಿಗೆ ಆಳ್ವಾರರುಗಳಿಂದಲೂ ಆಚಾರ್ಯರುಗಳಿಂದಲೂ ಅನುಗ್ರಹಿಸಲ್ಪಟ್ಟ ವರಪ್ರಸಾದ. ಅರ್ಚಾವತಾರದ ಪೂಜೆ ಜನಸಾಮಾನ್ಯದಲ್ಲಿ ವಾಡಿಕೆಯಲ್ಲಿ ಬರುವುದಕ್ಕೆ ಹೆಚ್ಚಾಗಿ ಶ್ರಮಿಸಿ ಅದರ ಮಹತ್ವವನ್ನು ಬೋಧಿಸುತ್ತಲೂ ಅನುಷ್ಠಾನದಲ್ಲಿ ಬರುವಂತೆಯೂ ಮಾಡಿದ ಕೀರ್ತಿ ರಾಮಾನುಜರಿಗೇ ಸಲ್ಲಬೇಕು. ತಾವು ಬರೆದಿರುವ ಗೀತಾಭಾಷ್ಯದಲ್ಲಿ ಅರ್ಚಾವತಾರದ ಬಗ್ಗೆ ಹೇಳುತ್ತ ಅದು ಮಹತ್ತರವಾದುದು ಎಂದು ಹೇಳುತ್ತಾರೆ. ಅರ್ಚಾವತಾರವು ವಾಚಾಮಗೋಚರವಾದುದು ಊಹೆಗೂ ಮಿಗಿಲಾದುದು. ಅಲ್ಲದೆ ಅವರವರ ಅಭೀಷ್ಟಗಳನ್ನು ಈಡೇರಿಸುವ ಸಾಧನವೆಂದೂ ಬರೆದಿದ್ದಾರೆ. ಯೋಗಿಗಳೂ ಕೂಡ ಅರ್ಚಾವತಾರದ ವೈಭವ ಮತ್ತು ಮಹತ್ವವನ್ನು ಅನುಭವಿಸಿ ಆನಂದಿಸುತ್ತಾರೆ, ಪರರೂಪವನ್ನು ದರ್ಶಿಸುತ್ತಾರೆ. ಸಂತೋಷದಿಂದ ಉಬ್ಬಿ ಅರ್ಚಾವತಾರವನ್ನು ಆಭರಣಗಳಿಂದಲೂ ವಸ್ತ್ರದಿಂದಲೂ ಪುಷ್ಪಗಳಿಂದಲೂ ಅಲಂಕರಿಸಿ, ನೋಡಿ ನೋಡಿ ಆನಂದಸಾಗರದಲ್ಲಿ ಮುಳುಗಿ ಆನಂದ ಭಾಷ್ಪಗಳನ್ನು ಸುರಿಸುತ್ತಾ ತಮ್ಮಲ್ಲಿ ತಾವೆ ಲೀನರಾಗಿ ಹೋಗುತ್ತಾರೆ. ರಾಮಾನುಜರು ದೇವಾಲಯಗಳಲ್ಲಿ ಪೂಜಾವಿಧಾನ ಮತ್ತು ಆಯಾ ದೇವಾಲಯದ ಮೇಲ್ವಿಚಾರಣೆ ಎಲ್ಲವನ್ನೂ ನಿಗಧಿಗೊಳಿಸಿದುದು ಅರ್ಚಾವತಾರದಲ್ಲಿ ಅವರಿಗಿದ್ದ ಆಸಕ್ತಿ ಎಷ್ಟೆಂಬುದನ್ನು ಮತ್ತು ಅದರ ಮಹತ್ವವೆಷ್ಟೆಂಬುದನ್ನು ಸೂಚಿಸುತ್ತದೆ.

ರಾಮಾನುಜರ ಜೀವನದಲ್ಲಿ ಅರ್ಚಾವತಾರದ ಮಹಿಮೆಯನ್ನು ಕುರಿತ ಒಂದು ಸಂದರ್ಭವಿದೆ ಅವರು ಬಾಲ್ಯದಲ್ಲಿ ಯಾದವಪ್ರಕಾಶರಲ್ಲಿ ವಿದ್ಯಾಭ್ಯಾಸ ಮಾಡುವುದು, ಉಪನಿಷತ್ ವಾಕ್ಯಾರ್ಥದಲ್ಲಿ ತಮ್ಮ ಗುರುಗಳೊಡನೆ ಭೇದಭಾವ ಬಂದು ಗುರುಗಳಿಗೆ ಶಿಷ್ಯನಿಗೆ ಅಧಿಕಪ್ರಸಂಗವೆಂದು ಭಾವಿಸಿ ಮನಸ್ಸಿನಲ್ಲೆ ಕುದಿದು ಆತನನ್ನು ಕೊಲ್ಲಲು ಯತ್ನಿಸಿ ಯಾತ್ರೆಯ ನೆಪದಲ್ಲಿ ಪ್ರಯಾಣಮಾಡುತ್ತಿರಲು, ರಾಮಾನುಜರ ತಮ್ಮನಾದ ಗೋವಿಂದರ ಮೂಲಕ ಯಾದವಪ್ರಕಾಶರ ದುರುದ್ದೇಶ ತಿಳಿದು ಒಂಟಿಯಾಗಿ ತಲೆತಪ್ಪಿಸಿಕೊಂಡು ಕಗ್ಗತ್ತಲಲ್ಲಿ ದಟ್ಟವಾದ ಕಾಡುಮೇಡುಗಳಲ್ಲಿ ಪ್ರದೇಶದಲ್ಲಿ ನಡೆದು ಬರುತ್ತಿರಲು ಅವರಿಗೆ ದಾರಿತೋರಿಸಲು ಬೇಡ ದಂಪತಿಗಳು ಸಹಾಯಮಾಡಿ ಕಾಂಚೀಪುರವು ಸಮೀಪ ಸುತ್ತಿರಲು ಅವರಿಬ್ಬರೂ ಕಾಣೆಯಾಗುತ್ತಾರೆ. ಶ್ರೀ ವರದರಾಜಸ್ವಾಮಿಯೇ ಅವರ ನೆರವಿಗೆ ಬಂದು ಮಾರ್ಗದರ್ಶನ ಮಾಡಿ ಹೋದುದನ್ನು ಅವರು ಅತ್ಯಂತ ದೈನ್ಯದಿಂದ ಬಾಯಿತುಂಬ ಹೊಗಳಿ ಕೊಂಡಾಡಿ ಮನಸಾರ ನಮಸ್ಕರಿಸುತ್ತಾರೆ. ಅದು ಮೊದಲು ಕೊಳದಿಂದ ನೀರು ತಂದು ಸ್ವಾಮಿಗೆ ಸಮರ್ಪಿಸಿ ಸೇವೆ ಮಾಡುತ್ತಾರೆ. ಇದು ಅರ್ಚಾವತಾರದ ಮತ್ತೊಂದು ಸಂದೇಶ.

ರಾಮಾನುಜರು ಕಾಂಚಿಪುರದಲ್ಲಿ ವಿದ್ಯಾಭ್ಯಾಸವನ್ನು ಕಾಂಚೀಪೂರ್ಣರಲ್ಲಿ ಮಾಡುತ್ತಿರುವಾಗ್ಗೆ ತಮ್ಮ ಗುರುಗಳು ಶ್ರೀ ವರದರಾಜಸ್ವಾಮಿಯ ಅಂತರಂಗ ಭಕ್ತರೆಂದು ತಿಳಿದಿದ್ದ ಅವರು ತಮ್ಮ ಮನೋಭೀಷ್ಟವನ್ನು ಸ್ವಾಮಿಯಲ್ಲಿ ತಿಳಿಸಿ ಪರಿಹಾರವನ್ನು ನಿರೀಕ್ಷಿಸುತ್ತಾರೆ. ಅದರ ಫಲವಾಗಿ ಸ್ವಾಮಿಯು, ಕಾಂಚೀಪೂರ್ಣರ ಮೂಲಕ ರಾಮಾನುಜರಿಗೆ ಶರಣಾಗತಿ - ತತ್ತ್ವವನ್ನೂ;

(32ನೇ ಪುಟ ನೋಡಿ)

# ಇಡುಗುಂಜಿ ವಿನಾಯಕ

ಉತ್ತರ ಕನ್ನಡ ಜಿಲ್ಲೆಯ ಇಡುಗುಂಜಿ ಹಾಗೂ ಗೋಕರ್ಣದ ಎರಡು ಕೈಗಳ ಗಣಪತಿ ವಿಗ್ರಹಗಳು ಕರ್ನಾಟಕದಲ್ಲೇ ಅತ್ಯಂತ ಪ್ರಾಚೀನವೆಂದು ವಿದ್ವಾಂಸರ ಅಭಿಪ್ರಾಯ. ಇವುಗಳ ರಚನಾಕಾಲ ಸುಮಾರು ಕ್ರಿ. ಶ. 2 ರಿಂದ 4 ಶತಮಾನಕಾಲದಷ್ಟು ಹಳೆಯದು. ಇದೇರೀತಿಯ ಎರಡು ಕೈ ಇರುವ ಗಣೇಶನ ವಿಗ್ರಹ ದಕ್ಷಿಣ ಕನ್ನಡದ ಹಟ್ಟಿಯಂಗಡಿಯಲ್ಲಿವೆ. ಈ ಎಲ್ಲಾ ಮೂರ್ತಿಗಳು ಮಾನವನಿಗಿಂತ ಆನೆಯ ಆಕಾರವನ್ನೆ ಹೆಚ್ಚಾಗಿ ಹೋಲುತ್ತವೆ. ಗೋಕರ್ಣದ ಗಣಪತಿ ವಿಗ್ರಹವು ಇಡುಗುಂಜಿ ವಿಗ್ರಹಕ್ಕಿಂತ ದೊಡ್ಡದಾಗಿದೆ. ಇಡುಗುಂಜಿ ಮಹಾಗಣಪತಿ ವಿಗ್ರಹವು ನೋಡಲು ಸುಂದರವಾಗಿದ್ದು ಗಿಡ್ಡವಾಗಿದೆ.

### ಗೋಕರ್ಣ :

ಕುಮಟಾ ತಾಲೂಕಿನ ಮಹಾಬಲೇಶ್ವರನ ಪಕ್ಕಕ್ಕಿದೆ ಈ ಗಣಪತಿ ಮಂದಿರ. ರಾವಣನು ತನ್ನ ತಪಃಶಕ್ತಿಯಿಂದ ಈಶ್ವರನನ್ನು ಒಲಿಸಿ ಆತ್ಮಲಿಂಗವನ್ನು ಪಡೆದಾಗ, ಶಿವನು ಈ ಆತ್ಮಲಿಂಗವನ್ನು ನಡುವೆ ಎಲ್ಲಿಯೂ ಧರೆಗೆ ತಾಗಿಸಬಾರದೆಂದು ಎಚ್ಚರಿಕೆ ನೀಡುತ್ತಾನೆ. ಎಲ್ಲಿ ಭೂಮಿ ಮೇಲೆ ಸ್ಪರ್ಶವಾಯಿತೋ ಅಲ್ಲಿ ನಾನೂ ನೆಲಸುತ್ತೇನೆ ಎನ್ನುತ್ತಾನೆ. ಈ ಆತ್ಮಲಿಂಗವು ಲಂಕೆಯನ್ನು ಸೇರದಂತೆ ಮಾಡಲು ದೇವತೆಗಳೆಲ್ಲಾ ಉಪಾಯ ಮಾಡಿ ಗಣಪತಿಯನ್ನು ವಟುರೂಪದಲ್ಲಿ ಭೂಲೋಕಕ್ಕೆ ಕಳುಹಿಸುತ್ತಾರೆ. ಸಂಧ್ಯಾವಂದನೆ ಮಾಡುವ ಸಮಯ ಬಂದಾಗ ರಾವಣನು ಈ ವಟುರೂಪಿ ಗಣೇಶನನ್ನು ಕಂಡು ಅವನ ಕೈಯಲ್ಲಿ ಈ ಆತ್ಮಲಿಂಗವಿರಿಸಿ ತೆರಳುತ್ತಾನೆ. ಈ ಗಣೇಶನು ಮೂರು ಬಾರಿ ಕರೆಯುವುದೊರಳಗೆ ಬರಬೇಕು, ಇಲ್ಲವಾದರೆ ಈ ಲಿಂಗವನ್ನು ಧರೆಯ ಪಾಲು ಮಾಡುವುದಾಗಿ ಎಚ್ಚರಿಸುತ್ತಾನೆ. ರಾವಣನು ಸಂಧ್ಯಾವಂದನೆ ಆರಂಭಿಸುತ್ತಿರುವಾಗಲೇ ಗಣೇಶನು ಮೂರು ಬಾರಿ "ರಾವಣ" ಎಂದು ಕರೆದು ಆತ್ಮಲಿಂಗವನ್ನು ಧರೆಗೆ ಸೇರಿಸುತ್ತಾನೆ. ರಾವಣನು ಸಿಟ್ಟಿನಿಂದ ಗಣಪತಿ ತಲೆಯ ಮೇಲೆ ಕುಟ್ಟುತ್ತಾನೆ. ವಟುರೂಪದ ಗಣಪತಿ ಮಾಯವಾಗಿ ಗಣೇಶನು ವಿಗ್ರಹದ ರೂಪದಲ್ಲಿ ಅಲ್ಲಿ ನೆಲೆ ನಿಲ್ಲುತ್ತಾನೆ. ರಾವಣನು ತಲೆಗೆ ಹೊಡೆದ ಕುರುಹು ವಿಗ್ರಹದಲ್ಲಿ ಹೊಂಡದರೂಪದಲ್ಲಿ ಈಗಲೂ ಕಾಣಬಹುದಾಗಿದೆ. ಆತ್ಮಲಿಂಗವು ಧರೆಯೊಳಗೆ ಸೇರಿ ಮಹಾಬಲೇಶ್ವರ ಎನಿಸಿಕೊಂಡಿತು. ಈ ಲಿಂಗವು ಗೋವಿನ ಕಿವಿಯ ಆಕಾರದಲ್ಲಿ ಇರುವುದರಿಂದ ಇಲ್ಲಿಗೆ ಗೋಕರ್ಣ ಎಂಬ ಹೆಸರು ಬಂತು. ಈ ದೇವಾಲಯದ ಪರಿಸರದಲ್ಲಿ 30 ತೀರ್ಥಗಳೂ 30 ಲಿಂಗಗಳೂ ಇವೆ. ದೊಡ್ಡದಾದ ಕೋಟಿ ತೀರ್ಥವಿದೆ. ಭೈರವ, ಅಗಸ್ತ್ಯೇಶ್ವರ, ಅನಿರುದ್ಧ, ಭರತ ಮುಂತಾದವುಗಳ ಗುಡಿಗಳಿವೆ. ಸಮುದ್ರತೀರದಲ್ಲಿರುವ ಗೋಕರ್ಣ ಕ್ಷೇತ್ರವು 'ಯಾತ್ರಾರ್ಥಿಗಳಿಗೆ ಪ್ರವಾಸಿ-ತಾಣವೂ ಆಗಿದೆ. ಶಿವರಾತ್ರಿಯಂದು ಮಹಾಬಲೇಶ್ವರನ ರಥೋತ್ಸವ ನಡೆಯುತ್ತದೆ. ಎಲ್ಲಾ ಜಿಲ್ಲಾ ಕೇಂದ್ರಗಳಿಂದ ಇಲ್ಲಿಗೆ ಬಸ್ಸಿನ ಸೌಕರ್ಯವಿದೆ.

### ಇಡಾಗುಂಜಿ :

ಹೊನ್ನಾವರ ತಾಲೂಕಿನಲ್ಲಿರುವ ಇಡುಗುಂಜಿ ಭಾರತದ ಅಷ್ಟಕ್ಷೇತ್ರಗಳಲ್ಲಿ ಒಂದು. ಪ್ರಕೃತಿಯ ರಮ್ಯ ದೃಶ್ಯಗಳ ನಡುವೆ ಪ್ರಶಾಂತವಾದ ವಾತಾವರಣದಲ್ಲಿದೆ ದೇವಾಲಯ. ಪಂಚಲೋಹದ ಚಿನ್ನದ ಲೇಪನವಿರುವ ಕಳಸವನ್ನೊಂದಿದ ದೇವಾಲಯ ಬಹು ಸುಂದರವಾಗಿದೆ. ಸುಸಜ್ಜಿತ ಕಲ್ಯಾಣಮಂಟಪವೂ ರೂಪುಗೊಂಡಿದೆ.

ಶ್ರೀ ಗಂಗಾಧರ ಮಟ್ಟಿ

ನಾರದರ ಸಲಹೆಯಂತೆ ಋಷಿ ವಾಲಖಿಲ್ಯರು ಶರಾವತಿ ನದಿ ದಂಡೆಯ 'ಇಡಾಕುಂಜವನ'ದಲ್ಲಿ ತಪಸ್ಸು ಗೈಯುತ್ತಾ ಇದ್ದರು. ಇತ್ತ ಕೈಲಾಸಕ್ಕೆ ತೆರಳಿದ ನಾರದರು ಶಿವಪಾರ್ವತಿಯರೊಡನೆ "ಇಡಾಕುಂಜವನ ಮಹಾಸಿದ್ಧಿಗೊಳ್ಳುವ ತಾಣವಾಗಬೇಕು, ಕಲಿಕಾಲದ ಪಾಪ ಸಂಸ್ಕಾರ, ವಿಘ್ನಗಳ ಆಘಾತ ನಿವಾರಣೆಗಾಗಿ ವಿಘ್ನನಿವಾರಕ ಗಣೇಶ ಅಲ್ಲಿ ನೆಲೆವೂರಬೇಕು. ಅಲ್ಲಿ ತಪಃಸಿದ್ಧಿಗಾಗಿ ವಾಲಖಿಲ್ಯರು ತಳಮಳಿಸುತ್ತಿದ್ದಾರೆ, ನಂಬಿಕೆಯ ನೆಲೆಯಾದ ಸಿದ್ಧಿಸ್ಥಾನಕ್ಕಾಗಿ ಅಲ್ಲಿಗೆ ತ್ರಿಮೂರ್ತಿಗಳೂ ನಿಮ್ಮ ಶಕ್ತಿ ಪರಿವಾರದೊಡನೆ ಬಂದು ನೆಲೆಗೊಳ್ಳಬೇಕು. ಸಕಲ ವಿಘ್ನ ನಿವಾರಕನಾದ



ಶ್ರೀ ಮಹಾಗಣಪತಿಯು ಸ್ವತಃ ಕ್ಷೇತ್ರಾಧೀಶನಾಗಿ ನೆಲಸಬೇಕು ಎಂದು" ಬಿನ್ನಯಿಸಿಕೊಂಡರು.

ನಾರದರ ಅಭೀಷ್ಟೆಯಂತೆ ಇಡಾಕುಂಜ ವನದಲ್ಲಿ ಮಹಾಗಣಪತಿಯು ನೆಲೆನಿಂತು ಭಕ್ತರ ಸಕಲ ಇಷ್ಟಾರ್ಥಗಳನ್ನು ನೆರವೇರಿಸಿಕೊಡುತ್ತಾ ಬಂದಿದ್ದಾನೆ. ಇದೇ ಇಡಾಕುಂಜವನವು ಮುಂದೆ ಇಡುಗುಂಜಿಯಾಗಿ ಲೋಕ ಪ್ರಸಿದ್ಧಿಗೊಂಡಿತು. ಇಡುಗುಂಜ ಶ್ರೀ ಮಹಾಗಣಪತಿಯು ಇಲ್ಲಿನ ಜನಜೀವನದಲ್ಲಿ ಹಾಸುಹೊಕ್ಕಾಗಿ ನಿಂತು ಮನೆಗಳಲ್ಲಿ ನಡೆಯುವ ಯಾವುದೇ ಶುಭಕಾರ್ಯಗಳಿಗೆ ದೇವಾಲಯಕ್ಕೆ ಬಂದು ಪ್ರಸಾದ ಹಚ್ಚಿ ತಮ್ಮ ಕಾರ್ಯ ಕೈಗೂಡುವಂತೆ ಪ್ರಾರ್ಥಿಸಿಕೊಳ್ಳುತ್ತಾರೆ ಕಾರ್ಯಕ್ಕೆ ತಡೆ ಇದ್ದರೆ ಎಡಗಾಲಿನ ಪ್ರಸಾದವಾಗುತ್ತದೆ. ಈ ಗಣೇಶನಿಗೆ "ಕೊಳೆ ಅಡಿಕೆ ಗಣೇಶ" ಎಂತಲೂ ಕರೆಯುತ್ತಾರೆ. ಅಡಕೆ ಬೆಳೆಗೆ ಕೊಳೆರೋಗ ಬಂದರೆ ಪಂಚಗಜ್ಜಾಯದ ಹರಕೆ ಹೇಳಿಕೊಳ್ಳುತ್ತಾರೆ. ಉತ್ತರ ಕನ್ನಡದ ಯಕ್ಷಗಾನ ಕಲಾವಿದರಿಗೆ ಈ ಗಣೇಶ ಸ್ಫೂರ್ತಿದಾಯಕ. ಇಡುಗುಂಜಿ ಶ್ರೀ ಮಹಾಗಣಪತಿಯ ಸಂಪೂರ್ಣ ಅನುಗ್ರಹ ಹೊಂದಿದ "ಶ್ರೀ ಇಡುಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿ ಕೆರೆಮನೆ" ಮೇಳವು 50 ನೇ ವರ್ಷಕ್ಕೆ ಕಾಲಿರಿಸಿ "ಸುವರ್ಣ ಮಹೋತ್ಸವ"ವನ್ನು ಆಚರಿಸುತ್ತಿದೆ. ಅಲ್ಲದೆ ಕಳೆದ ವರ್ಷ ಈ ಮೇಳ ಬಹ್ರೈನ್‌ನಲ್ಲಿ ಎರಡು ಕಾರ್ಯಕ್ರಮಗಳನ್ನು ನೀಡಿ ಯಕ್ಷಗಾನ ಕಲೆಯನ್ನು ಸಾಗರೋಲ್ಲಂಘನದಿಂದ ಯಶಸ್ವಿಗೊಳಿಸಿದುದು ಹೆಮ್ಮೆಯ ವಿಷಯ.

ಸಂಕಷ್ಟದಿವಸ ಇಲ್ಲಿ ಅಧಿಕ ಭಕ್ತರು ಸೇರುತ್ತಾರೆ. ಗಣೇಶ ಚತುರ್ಥಿಯಂದು ವೈಭವದ ಉತ್ಸವವೂ, ರಥಸಪ್ತಮಿಯಂದು ರಥೋತ್ಸವವೂ ಜರುಗುತ್ತದೆ. ಇಲ್ಲಿಗೆ ಹೊನ್ನಾವರದಿಂದ ಬಸ್ ಸೌಕರ್ಯ ಇದೆ.

———

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ, 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ | ರಾತ್ರಿ 7–00 ರಿಂದ 8–00 | — |
| (ಮುಕುರ ಮಂಟಪದಲ್ಲಿ) | (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | |
| ರಾತ್ರಿ ಗಂಟೆ | ರಾತ್ರಿ 7–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

# ಆನೆಗುಡ್ಡೆ ವಿನಾಯಕ

ಶ್ರೀ ಶ್ರೀನಿವಾಸ ತಂತ್ರಿ

ರಜತಪೀಠಃ ಕುಮಾರಾದ್ರಿ
ಕುಂಭಾಸೀ ಚ ಧ್ವಜೇಶ್ವರಃ ।
ಕ್ರೋಡ ಗೋಕರ್ಣ ಮೂಕಾಂಬಾ
ಸಪ್ತೈತಾ ಮೋಕ್ಷದಾಯಕಾ ॥

ಉತ್ತರಕನ್ನಡದ ಗೋಕರ್ಣದಿಂದ ದಕ್ಷಿಣ ತುದಿಯ ಕನ್ಯಾಕುಮಾರಿವರೆಗೆ ಪಸರಿಸಿದ ಕರಾವಳಿ ಭೂಭಾಗ ಪರಶುರಾಮ ಕ್ಷೇತ್ರವೆಂದು ಪ್ರತೀತಿ. ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಹಲವಾರು ಪವಿತ್ರ ತೀರ್ಥ ಯಾತ್ರಾಕ್ಷೇತ್ರಗಳು ಪ್ರಸಿದ್ಧಿ ಪಡೆದಿವೆ. ಅಂತಹ ಕ್ಷೇತ್ರಗಳಲ್ಲಿ ಉಡುಪಿ, ಸುಬ್ರಹ್ಮಣ್ಯ, ಕುಂಭಾಸಿ, ಕೋಟೇಶ್ವರ, ಶಂಕರನಾರಾಯಣ, ಗೋಕರ್ಣ, ಕೊಲ್ಲೂರು ಇವು ಪರಶುರಾಮ ಸೃಷ್ಟಿಯ ಮೋಕ್ಷದಾಯಕ ಸಪ್ತಪುಣ್ಯಕ್ಷೇತ್ರಗಳು. ಉಡುಪಿ, ಕುಂಭಾಸಿ, ಕೋಟೇಶ್ವರ, ಗೋಕರ್ಣ ಕ್ಷೇತ್ರಗಳು ಪಶ್ಚಿಮ ಕರಾವಳಿಯ ಅಂಚಿನಲ್ಲಿವೆ. ಕುಂಭಾಸಿ ಗಣೇಶಾರಾಧನೆಗೆ ಪ್ರಾಧಾನ್ಯತೆ ಪಡೆದ ಕುಂದಾಪುರ ತಾಲೂಕಿನ ಕಾರಣಿಕದ ಕ್ಷೇತ್ರ. ಉಡುಪಿ–ಕುಂದಾಪುರ ರಾಷ್ಟ್ರೀಯ ಹೆದ್ದಾರಿಯ ಕೋಟದ ಸಮೀಪ ಕುಂಭಾಸಿಯಿದೆ. ಅದೇ ಆನೆಗುಡ್ಡೆ. ಕುಂದಾಪುರದಿಂದ ಕುಂಭಾಸಿ 2 ಕಿ. ಮೀ. ದಕ್ಷಿಣಕ್ಕಿದೆ. ರಾಷ್ಟ್ರೀಯ ಹೆದ್ದಾರಿಗಿಂತ ಪೂರ್ವದ ಕಾಂಕ್ರೀಟ್ ರಸ್ತೆಯಲ್ಲಿ ತುಸು ದೂರ ದಾರಿ ಸವೆಸಿದರೆ ಪರಿಸರದಲ್ಲಿ ಖ್ಯಾತಿವೆತ್ತ ಆನೆಗುಡ್ಡೆ ವಿನಾಯಕ ದೇಗುಲ ಭಕ್ತಾದಿಗಳನ್ನು ಕೈಬೀಸಿ ಕರೆಯುತ್ತದೆ.

ಹಿಂದೆ ಕುಂಭಾಸುರನೆಂಬ ರಾಕ್ಷಸನು ಮಹೇಂದ್ರಗಿರಿಯಲ್ಲಿ ತನ್ನ ತಪಃಪ್ರಭಾವದಿಂದ ಈಶ್ವರನನ್ನು ಮೆಚ್ಚಿಸಿ ವರ ಪಡೆದಿದ್ದ. ತನಗೆ ವಿನಾಶವಿಲ್ಲವೆಂಬ ಮದಾಂಧತೆಯಿಂದ ಕುಂಭಾಸುರ ನಾಗಾಚಲಕ್ಕೆ ಬಂದು ಜನರನ್ನು ಮೃತ್ಯುರೂಪಿಯಾಗಿ ಪೀಡಿಸತೊಡಗಿದ. ಆತನ ಉಪಟಳ ತಾಳಲಾರದೆ ಗೌತಮಾದಿ ಋಷಿಮುನಿಗಳು ತಮ್ಮ ಶಿಷ್ಯರೊಂದಿಗೆ ತುಂಗಾತೀರಕ್ಕೆ ತೆರಳಿದರು.-ಅಲ್ಲಿ ಪಾಂಡವರಲ್ಲಿ ಹಿರಿಯನಾದ ಧರ್ಮರಾಯ ಅವರಿಗೆ ಅಭಯವನ್ನಿತ್ತು ಭೀಮಸೇನನನ್ನು ಕುಂಭಾಸುರ ಸಂಹಾರಕ್ಕೆಂದು ಕಳುಹಿಸಿಕೊಟ್ಟನು. ಭೀಮಸೇನ – ಕುಂಭಾಸುರರೊಳಗೆ ಘೋರ ಕದನವೇರ್ಪಟ್ಟು ಯಾರೂ ಜಯವನ್ನು ಗಳಿಸದಾಗ– "ಭೀಮಸೇನ... ರಕ್ಕಸ ಈಶ್ವರನ ವರ ಪಡೆದುದರಿಂದ ನೀನು ಆತನನ್ನು ಸುಲಭದಲ್ಲಿ ಜಯಿಸಲಾರೆ. ಅದಕ್ಕಾಗಿ ಬೆಟ್ಟದ ಮೇಲೆ ನೆಲೆನಿಂತ ವಿಘ್ನೇಶನನ್ನು ಆರಾಧಿಸಿ ಪ್ರಸಾದ ರೂಪದ ಖಡ್ಗ ಧರಿಸಿ ಕುಂಭಾಸುರನನ್ನು ಸಂಹರಿಸು' ಎಂದು ಕೇಳಿ ಬಂದ ಅಶರೀರವಾಣಿಯಂತೆ ಭೀಮಸೇನ ವಿಘ್ನೇಶನನ್ನು ಸ್ತುತಿಸಿ ವರರೂಪವಾಗಿ ಖಡ್ಗ ಪಡೆದು ಕುಂಭಾಸುರನೊಡನೆ ಸೆಣಸಾಡಿ ವಧಿಸಿ ಲೋಕಕ್ಕೆ ಸುಖ ಶಾಂತಿ ತಂದೊದಗಿಸಿದ. ಹೀಗೆ ಕುಂಭನೆಂಬ ರಾಕ್ಷಸನಿಗೆ ಅಸಿ (ಖಡ್ಗ) ದಿಂದ ತರಿದ ಕುರುಹಾಗಿ ಊರಿಗೆ ಕುಂಭಾಸಿ ನಾಮಧೇಯ ಪ್ರಾಪ್ತವಾಯ್ತು. ಜನತೆಗೆ ಅಭಯವನ್ನಿತ್ತು ವಿಘ್ನೇಶ್ವರ ಇಂದಿಗೂ ಅಲ್ಲಿ ನೆಲೆನಿಂತಿದ್ದಾನೆ. ಮೊದಲು ಕುಂಭಕಾಶಿ ಎನಿಸಿದ್ದ ಹೆಸರು ಕ್ರಮೇಣ ಕುಂಭಾಶಿ, ಕುಂಭಾಸಿ ಎಂದು ಜನಜನಿತವಾಯ್ತು.

ಕ್ಷೇತ್ರದ ಐತಿಹ್ಯಕ್ಕೆ ದ್ವಾಪರದ ಕಥೆಯೊಂದು ಪ್ರತೀತಿಯಲ್ಲಿದೆ. ಭರತಖಂಡದ ತ್ರ್ಯಯಂಬಕ ಗಿರಿಯಲ್ಲಿ ಗೌತಮ ಮುನಿಗಳು ತಪೋನಿರತರಾಗಿದ್ದಾಗ ಲೋಕದಲ್ಲಿ ಶಾಂತಿ, ಸುಭಿಕ್ಷೆ ನೆಲೆಸಿತ್ತು. ಇದ್ದಕ್ಕಿದ್ದಂತೆ ಕಾಲ ಬದಲಾಗಿ ಮಳೆಯಿಲ್ಲದೆ ನಾಡು ಕ್ಷಾಮದ ದವಡೆಯಲ್ಲಿ ಸಿಲುಕಿತು. ಜನತೆ ಸಾಯುವ ಸ್ಥಿತಿಯಲ್ಲಿ ದಿಗ್ಭ್ರಾಂತರಾಗಿ ಗೌತಮ ಋಷಿಗಳಲ್ಲಿ ಕಷ್ಟ ತೋಡಿಕೊಂಡರು. ಗೌತಮರು ಅವರೊಂದಿಗೆ ನಾಗಾಚಲಕ್ಕೆ ಬಂದು ಕಠಿಣ ತಪವನ್ನಾಚರಿಸಿದರು. ಅತ್ತ ಕೈಲಾಸದಲ್ಲಿ ಶಿವನ ಮಡದಿ ಪಾರ್ವತಿ, ಸವತಿ ಗಂಗೆಯ ಸೊಕ್ಕಡಗಿಸಲು ಗಣೇಶನಲ್ಲಿ ಬಿನ್ನವಿಸಿಕೊಳ್ಳುವಳು. ಮಾತೆಯ ಆಣತಿಯನ್ನು ಪಾಲಿಸಲೋಸುಗ ಗಣೇಶನು ಗೌತಮ ಋಷಿಗಳ ಶಿಷ್ಯನಾಗಿ ಆಶ್ರಯವಾಸಿಯಾದ. ಗೌತಮ ಋಷಿಗಳು ಮಧುವನ ಹೆಸರಿನ ನಾಗಾಚಲದಲ್ಲಿ ಯಜ್ಞಕುಂಡಗಳನ್ನು ನಿರ್ಮಿಸಿ ತಪೋನಿರತರಾದರು. ಇದೇ ಸಂದರ್ಭದಲ್ಲಿ ಗಣೇಶ ಮಾಯಾ ಗೋವು, ಕರುಗಳನ್ನು ಸೃಷ್ಟಿಸಿ ಆಶ್ರಮದಲ್ಲಿ ಬೆಳೆಸಿದ ದರ್ಭೆ ಹುಲ್ಲನ್ನು ಮೇಯಲು ಬಿಟ್ಟ. ಕೋಪೋದ್ರಿಕ್ತರಾದ ಗೌತಮಮುನಿಗಳ ಕಮಂಡಲದ ಮಂತ್ರಪ್ರೋಕ್ಷಿಸಿ ಗೋವುಗಳು ಮೃತವಾಗುವಂತೆ ಮಾಡಿದರು. ಶಿಷ್ಯರ ತಪೋಬಲ ನಿಷ್ಫಲವಾಗಲೆಂದು ಶಪಿಸಿದರು. ಚಿಂತಾಕ್ರಾಂತರಾದ ಶಿಷ್ಯರು ಗುರುಗಳಲ್ಲಿ ಕ್ಷಮಾಭಿಕ್ಷೆ ಬೇಡಿದರು. ಶಾಂತರಾದ ಗುರುಗಳು ಶಾಪವಿಮೋಚನಾ ಸೂತ್ರ ಬೋಧಿಸಿದರು. ಅದರಂತೆ ಶಿಷ್ಯರು ಶಿವನನ್ನು ತಪಗೈದು ಮೆಚ್ಚಿಸಿ ಗಂಗೆ ಧರೆಗಿಳಿದು ಬರುವಲ್ಲಿ ಜಯಶೀಲರಾದರು. ಮೃತ ಗೋವುಗಳು ಬದುಕಿದವು. ಶಾಪವಿಮುಕ್ತರಾದ ಶಿಷ್ಯರು ಮಧುವನದಲ್ಲಿ ಶಿವನನ್ನು ಕುರಿತು ತಪೋನಿರತರಾದರು. ಮಹಾತಪಸ್ವಿ ಅಗಸ್ತ್ಯಮಹರ್ಷಿಗಳೂ ಒಂದುಗೂಡಿ ಹರಿಯನ್ನು ಪ್ರಾರ್ಥಿಸಿ ತನ್ಮೂಲಕ ಶಿವನು ಗಂಗೆಯ ಹಿಂದಂಶವನ್ನು ಗೌತಮರ ಕಮಂಡಲಿಗಿಳಿಯುವಂತಾಗಿಸಿನು. ಪಾರ್ವತಿಯ ಮಾತು ಪೂರೈಸಿದೆನೆಂಬ ಸಂತಸದಿಂದ ಗಣೇಶನು ಮಧುವನ (ಕುಂಭಾಸಿ)ದಲ್ಲಿ ನೆಲೆನಿಂತನೆಂದು ಇತಿಹಾಸವಿದೆ. ಗಣೇಶನು ಇಂದಿಗೂ ಶಿಲಾಂತರ್ಗತ ಶಕ್ತಿಸ್ವರೂಪಿಯಾಗಿ ಭಕ್ತರ ಸಂಕಷ್ಟಗಳನ್ನು ಹೋಗಲಾಡಿಸಿ 'ಸಂಕಷ್ಟಹರ'ನೆನಿಸಿಕೊಂಡಿದ್ದಾನೆ. ಆನೆಯಾಕೃತಿಯ ಕುಂಭಾಸಿ ಗುಡ್ಡದಲ್ಲಿ ನೆಲೆನಿಂತ ವಿನಾಯಕ "ಆನೆಗುಡ್ಡೆ ವಿನಾಯಕ"ವೆಂಬ ಅಭಿದಾನದಿಂದ ಭಕ್ತಾದಿಗಳನ್ನು ಸಲಹುತ್ತಿದ್ದಾನೆ.

ಕುಂಭಾಸಿಯಲ್ಲಿ ಪ್ರಾಚೀನ ಆದಿತ್ಯ ದೇವಾಲಯವಿದೆ. ೯ನೇ ಶತಮಾನದಷ್ಟು ಪುರಾತನವಾದ ಗರ್ಭಗೃಹ ಶಿಥಿಲವಾಗಿದೆ. ಆದಿತ್ಯ ಮೂರ್ತಿ 4–5 ಅಡಿ ಎತ್ತರವಾಗಿದ್ದು ಕಮಲ, ಹಿರಣ್ಯಗಳನ್ನು ಕೈಯಲ್ಲಿ ಹಿಡಿದಂತೆ ನಿರ್ದೇಶವಿದೆ. ಕೆರೆಯ ಮಧ್ಯೆ ಹರಿಹರ

ಮೂರ್ತಿಯನ್ನು ಹೊಂದಿದ ಗುಡಿಯೂ ಕುಂಭಾಸಿಯಲ್ಲಿದೆ. ಶ್ರೀ ಲಕ್ಷ್ಮೀನಾರಾಯಣ ಹಾಗೂ ಚೆನ್ನಕೇಶವ ವಿಗ್ರಹಗಳೂ ಅಲ್ಲಿವೆ. ಬೆಟ್ಟದ ಬುಡದಿಂದ ನೀರಿನ ಝರಿ ಹರಿದು ಬರುವ 'ಸೂರ್ಯಪುಷ್ಕರಿಣಿ, ಚಂದ್ರ ಪುಷ್ಕರಿಣಿಗಳು ತಮ್ಮ ಪಾವಿತ್ರ್ಯತೆಯನ್ನು ಉಳಿಸಿಕೊಂಡಿವೆ. ಹರಿಹರ ದೇಗುಲದ ಪಕ್ಕದಲ್ಲೇ 3–5 ಅಡಿ ಎತ್ತರದ ಪ್ರಭಾವಳಿಯಿಂದೊಡಗೂಡಿದ ಸೂರ್ಯನಾರಾಯಣ ವಿಗ್ರಹದ ಗುಡಿಯಿದೆ. ಇದು ಹೊಯ್ಸಳರ ಕಾಲದ್ದಿರಬಹುದೆಂದು ಪ್ರಾಚ್ಯ ಸಂಶೋಧಕ ಡಾ|| ಪಿ. ಗುರುರಾಜಭಟ್ಟರ ಅಭಿಪ್ರಾಯ. ಸೂರ್ಯನಾರಾಯಣ ವಿಗ್ರಹದ ಕಲಾನೈಪುಣ್ಯ ಪ್ರಶಾಂತ ಮುಖಭಾವದಿಂದೊಡಗೂಡಿ ಆಕರ್ಷಕವಾಗಿದೆ. ಗುಡಿಯ ಎದುರಿಗೆ ಯೂಪಸ್ತಂಭವಿರುವುದರಿಂದ ಗುಡಿ ಜೈನ ಸಾಮಂತ ಪ್ರತಿಷ್ಠಾಪಿತವಾಗಿದ್ದಿರಬೇಕು. ಸೂರ್ಯನಾರಾಯಣ ಗುಡಿಯ ಪಕ್ಕದಲ್ಲೇ ಮೆಟ್ಟಲಿನ ಬದಿಯಲ್ಲಿ 'ಮೆಟ್ಟಿಲು ನಾಗಮಂದಿರ'ವಿದೆ.

## ಶ್ರೀ ವಿನಾಯಕ

ಆನೆಗುಡ್ಡ ಗಣೇಶ ಸಿದ್ಧಿವಿನಾಯಕ. ದೇಗುಲದ ಎದುರುಗಡೆ ವಿಶಾಲ ಅಶ್ವತ್ಥ ವೃಕ್ಷವಿದೆ. ದೇಗುಲಕ್ಕೆ ಚೌಕಾಕಾರದ ಪೌಳಿಯಿದೆ. ವಿನಾಯಕನ ಮೂಲವಿಗ್ರಹವನ್ನು ಅವಲೋಕಿಸಿದರೆ ಸೊಂಡಿಲಿನ ಭಾಗ ತುಸು ಉಬ್ಬಿದಂತಿದೆ. ಹೊಟ್ಟೆ ಮುಂದೆ ಬಂದಿರುವುದರಿಂದ ಕಾಲುಗಳು ಅಸ್ಪಷ್ಟವಾಗಿ ಕಂಡುಬರುತ್ತದೆ. ವಿನಾಯಕನ ಶಿಲಾಮೂರ್ತಿ ವರ್ಷೇ ವರ್ಷೇ ಸ್ವಲ್ಪ ಸ್ವಲ್ಪವೇ ಬೆಳೆಯುತ್ತದೆಂಬುದು ಬಲ್ಲವರ ಅಭಿಮತ. ವಿನಾಯಕನಿಗೆ ನಿತ್ಯ ಪಂಚಾಮೃತಅಭಿಷೇಕ, ಅಲಂಕಾರ, ಪೂಜಾದಿಗಳು ಸಲ್ಲುತ್ತವೆ. ದೇವಾಲಯ ಕಿ. ಶ. ೮ನೆಯ ಶತಮಾನದ್ದಿರಬಹುದೆಂದು ಅಂದಾಜು. ಸಂಕ್ರಮಣ ದಿನ ಆನೆಗುಡ್ಡ ವಿನಾಯಕನಿಗೆ ಪ್ರಿಯದಿನ. ಅಂದು ಜಿಲ್ಲೆಯ ನಾನಾ ಭಾಗಗಳ ಭಕ್ತಾದಿಗಳು ಸನ್ನಿಧಿಗಾಗಮಿಸಿ ಸ್ವಾಮಿಸೇವೆ, ಹರಕೆ ಪೂರೈಸುತ್ತಾರೆ. ಅಷ್ಟದ್ರವ್ಯ ಪಂಚಕಜ್ಜಾಯ ವಿನಾಯಕನಿಗೆ ಬಲು ಪ್ರಿಯ. ಗಣಹೋಮ ಅವನಿಗೆ ಸಲ್ಲುವ ವಿಶೇಷ ಸೇವೆ.

ಭಾದ್ರಪದ ಶುದ್ಧ ಚೌತಿ (ವಿನಾಯಕ ಚತುರ್ಥಿ)ಯಂದು ಕುಂಭಾಸಿ ಗಣಪತಿಗೂ ವಿಶೇಷ ಪೂಜೆ, ಆರಾಧನೆ, ಗಣಯಾಗ, ಧಾರ್ಮಿಕ ಕಾರ್ಯಕ್ರಮಗಳು ಸಲ್ಲುತ್ತವೆ. ನಿತ್ಯ ಗಣಹೋಮ, ಹೂವಿನ ಪೂಜೆ, ರಂಗಪೂಜೆ, ಜರುಗುತ್ತವೆ. ಮಾರ್ಗಶಿರ ಶುದ್ಧ ಚೌತಿಯಂದು ಆನೆಗುಡ್ಡ ರಥೋತ್ಸವ ಸಂಭ್ರಮಯುತವಾಗಿ ಜರುಗುವುದು. ಮೂರು ದಿನಗಳ ವಿದ್ಯುಕ್ತ ವಿಧಿವಿಧಾನಗಳು ಸುತ್ತಲಿನ ಭಕ್ತಾದಿಗಳಿಗೆ ಸಂಭ್ರಮದ ಪರ್ವ. ಬೆಳ್ಳಿಯ ಗಣಪತಿ ಬಲಿಮೂರ್ತಿ ಉತ್ಸವದ ಪ್ರಧಾನ ದೇವತೆ. ಉತ್ಸವ ಕಾಲದಲ್ಲಿ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳು, ಅನ್ನ ಸಂತರ್ಪಣೆ, ಯಕ್ಷಗಾನ ಪ್ರದರ್ಶನಗಳು ಜರಗುತ್ತವೆ

ಕುಂಭಾಸಿಯ ಶಿಲೆಯಲ್ಲಿ ಮೂಡಿಬಂದ ಉದ್ಭವಗಣೇಶ ನಂಬಿದ ಜನಕ್ಕೆ ಇಂಬು ನೀಡಿ ಸಲಹುವ ಇಷ್ಟಾರ್ಥ ಪ್ರದಾಯಕ. ಆನೆಗುಡ್ಡ ವಿನಾಯಕನಿಗೆ ಗಣಯಾಗ, ಹೂವಿನಪೂಜೆ, ರಂಗಪೂಜೆ, ಮೋದಕ, ಕಡಬು, ಅಪ್ಪಸೇವೆ ಭಕ್ತರು ಸಮರ್ಪಿಸಬಹುದಾದ ಶಕ್ತ್ಯಾನುಸಾರ ಹರಕೆಗಳಿವೆ. ಶಕ್ತಿಯ ಕೇಂದ್ರ ಬಿಂದುವಾಗಿ, ಭಕ್ತ ಜನರ ಅಭೀಷ್ಟಗಳನ್ನು ನೆರವೇರಿಸಿ ಭಕ್ತಾದಿಗಳಲ್ಲಿ ಸಂತೃಪ್ತತೆಯನ್ನು ಮೂಡಿಸುವ ಆನೆಗುಡ್ಡ ಕ್ಷೇತ್ರ ಭಕ್ತಾದಿಗಳ ನೆರವಿನಿಂದಲೇ ಅನೇಕ ಅಭಿವೃದ್ಧಿ ಕಾರ್ಯ ಕೈಗೊಂಡು ದಿನದಿನಕ್ಕೆ ಬೆಳಗುತ್ತಿದೆ. ಯಾತ್ರಿಕರಿಗೆ ವಾಹನ ಸೌಲಭ್ಯ, ಇನ್ನಿತರ ಸೇವಾ ಸೌಕರ್ಯಗಳಿಗೆ ದೇವಾಲಯದ ಆಡಳಿತ ಮಂಡಳಿ ವಿಶೇಷ ಕಾಳಜಿ ವಹಿಸುತ್ತಿರುವುದು ಪ್ರಶಂಸಾರ್ಹ. ಪ್ರಶಾಂತ ಸುಂದರ ಪರಿಸರದಲ್ಲಿ ಭಕ್ತರ ಮನಸ್ಸನ್ನು ಪ್ರಫುಲ್ಲಿತಗೊಳಿಸಿ ದರ್ಶನ ಮಾತ್ರದಿಂದ ಧನ್ಯತೆಯಾ ಭಾವವನ್ನು ಮೂಡಿಸುವ ದೈವಿಶಕ್ತಿಯ ಕೇಂದ್ರ ಬಿಂದು 'ಆನೆಗುಡ್ಡ ವಿನಾಯಕ' ಸರ್ವರನ್ನೂ ಸಲಹುತ್ತಿರಲಿ.



ಪರಮಾತ್ಮನು ನಾನಾ ರೂಪದಲ್ಲಿ ಇರುವನು. ಕೆಲವರು ಐಶ್ವರ್ಯಕ್ಕೆ ಕಾರಣರಾಗಿರುವವರಾದರೆ ಇನ್ನು ಕೆಲವರು ಶಕ್ತಿಸಾಮರ್ಥ್ಯವುಳ್ಳವರೂ ಮತ್ತೆ ಕೆಲವರು ಸೌಂದರ್ಯಕ್ಕೆ ಕಾರಣಭೂತರಾಗಿರುವವರು ಆಗಿರುತ್ತಾರೆ. ದೇವತೆಗಳಲ್ಲಿ ತ್ರಿಮೂರ್ತಿಗಳೆಂದು ಪರಿಗಣಿಸಲ್ಪಡುವ ಬ್ರಹ್ಮ-ವಿಷ್ಣು – ಮಹೇಶ್ವರರೂ ಮುಖ್ಯವಾಗಿರುವರು. ಬ್ರಹ್ಮನು ಜಗತ್ತಿನ ಜೀವ ಅಜೀವಗಳ ನಿರ್ಮಾಣಕ್ಕೆ ಕಾರಣನೂ, ವಿಷ್ಣುವು ಅವುಗಳ ರಕ್ಷಣಾಭಾರವನ್ನು ಹೊರುವವನೂ, ಮೂರನೆಯವನಾದ ಮಹೇಶ್ವರನು ನಾಶಕ್ಕೂ ಹೊಣೆಯಾಗಿದ್ದು ಈ ರೀತಿಯಾಗಿ ದೇವತೆಗಳು ಪ್ರತ್ಯೇಕ ಪ್ರತ್ಯೇಕವಾದ ವಿಭಾಗಗಳಲ್ಲಿ ಮೇಲ್ವಿಚಾರಣೆ ಮಾಡುತ್ತಿರುವರು. ದೇವತೆಗಳಲ್ಲಿ ಕೆಲವರನ್ನು ಹೆಂಗಳೆಯರು ನೋಡಬಾರದೆಂದೂ, ಕೆಲವರನ್ನು ಕೀಳುಜಾತಿಯವರು ನೋಡಲಾಗದೆಂದೂ, ಕೆಲವು ದೇವತೆಗಳನ್ನು ಅತ್ಯಂತ ಪರಿಶುದ್ಧರಾಗಿರುವವರು ಮಾತ್ರ ಪೂಜಿಸಬಹುದಾದಂತಹವರೂ ಇರುವರು. ಇನ್ನೂ ಕೆಲವರನ್ನು ಕಾರ್ಯಯಶಸ್ವಿಗಾಗಿ ಭಜಿಸಬಹುದಾದಂತಹವರು ಇರುವರು.

ಆದರೆ ಬೇರೆ ಬೇರೆ ವಿಭಾಗಗಳ ಮೇಲ್ವಿಚಾರಣೆಯನ್ನು ಬೇರೆಬೇರೆಯವರೇ ಮಾಡುತ್ತಿದ್ದರೂ ಎಲ್ಲಾ ವಿಭಾಗಗಳಿಗೆ ಹೊಂದುವಂತಹ ದೇವನೊಬ್ಬನಿರುವನು. ಅವನ ಆಶೀರ್ವಾದ ಬಲವಿಲ್ಲದೆ ಯಾವ ಕಾರ್ಯಗಳೂ ನಡೆಯಲೊಲ್ಲವು. ಯಾವುದೇ ಶುಭಕಾರ್ಯವನ್ನು ಶುರುಮಾಡುವ ಮೊದಲು ವಿಘ್ನವಿನಾಯಕನನ್ನು ಪ್ರಾರ್ಥಿಸಿಯೇ ಮುಂದಿನ ಕಾರ್ಯಕ್ರಮವನ್ನು ಕೈಗೊಳ್ಳುವರು. ಅವನು ಪ್ರತಿಯೊಬ್ಬರಿಂದಲೂ ಪೂಜಿಸಲ್ಪಡುವನು. ಅವನನ್ನು ಭಜಿಸುವ ಭಕ್ತರಲ್ಲಿ– ಪ್ರಾಯ–ಲಿಂಗ–ಸ್ಥಾನ – ಜಾತಿ ಯಾವೊಂದು ರೀತಿಯ ಭೇದಭಾವವೂ ಇರುವುದಿಲ್ಲ. ಆದರೆ ಒಂದೇ ಒಂದು ನಿಯಮವೇನೆಂದರೆ– ಆರಾಧಕನ ಮನಸ್ಸು ಅತಿ ವಿಧೇಯತೆಯಿಂದಿರಬೇಕು ಎಂದು. ಈ ರೀತಿಯ ವಿಶಿಷ್ಟಗುಣವುಳ್ಳವನೇ ಸರ್ವಸಿದ್ಧಿಗೆ ಕಾರಣನಾಗಿರುವ ದೇವನಾದ ಗಣೇಶನು–

ಸರ್ವ ವಿಘ್ನ ಹರಂ ದೇವಂ
ಸರ್ವ ವಿಘ್ನ ವಿವರ್ಜಿತಮ್
ಸರ್ವಸಿದ್ಧಿ ಪ್ರದಾತಾರಮ್
ವಂದೇಹಂ ಗಣನಾಯಕಮ್

ಎಂದರೆ ಇವನು ವಿಘ್ನನಿವಾರಕನೂ ಸಿದ್ಧಿವಿನಾಯಕನೂ ಆಗಿರುವನು ಎಂದರ್ಥ. ಇವನು ಬೆಲೆಬಾಳುವ ವಸ್ತುಗಳನ್ನು ಎಂದಿಗೂ ಅಪೇಕ್ಷೆಪಡುವುದಿಲ್ಲ; ಭಕ್ತನಾದವನು ಅವನ ಎದುರು ಒಂದು ತೆಂಗಿನಕಾಯಿಯನ್ನು ಒಡೆದರೂ ಸಾಕು ಅವನು ಪೂರ್ಣ ತೃಪ್ತಿಪಡುತ್ತಾನೆ. ತೆಂಗಿನಕಾಯಿಯನ್ನು ಒಡೆದು ಸಮರ್ಪಿಸುವ ರೀತಿಯಲ್ಲಿ ಭಕ್ತನ ಆತ್ಮವು ದೇವನಿಗೆ ಸಮರ್ಪಿಸಲ್ಪಡುವುದು ಎಂದು ಇದರ ಮೂಲಾರ್ಥವಾಗಿದೆ. ಈ ಕಾಣಿಕೆಯನ್ನು ಗಣೇಶನು ಎಲ್ಲಕ್ಕಿಂತ ಹೆಚ್ಚು ಇಚ್ಛಿಸುವನು. ಏಕೆಂದರೆ ಧನಿಕನೇ ಆಗಲಿ ಭಿಕ್ಷುಕನೇ ಆಗಲಿ ಆತನಿಗೆ ತನ್ನ ಆತ್ಮವನ್ನು ಸಮರ್ಪಿಸಬಹುದಾಗಿದೆ.

ಇತರ ದೇವತೆಗಳು ಸೌಂದರ್ಯದಿಂದ ಕೂಡಿದವರಾದರೆ ಗಣೇಶನು ಸುಂದರನಲ್ಲ. ಅವನು ಆನೆಯ ರುಂಡವುಳ್ಳವನೂ, ಶರೀರವು ಮಾನವನದ್ದೂ ಆಗಿರುವುದು. ಆದುದರಿಂದ ನೋಡುವುದಕ್ಕೆ ವಿಚಿತ್ರವಾಗಿ ಕಾಣುವನು. ಪುರಾಣೇತಿಹಾಸಗಳ ಪ್ರಕಾರ ಇದಕ್ಕೆ ಹಲವಾರು ಉಪಕತೆಗಳಿರುವುವು. ಆದರೆ ಗಣೇಶನಿಗೆ ಸೌಂದರ್ಯವು ಅವನ ಮಟ್ಟಿಗೆ ಪ್ರಾಮುಖ್ಯವಾಗಿರುವುದಿಲ್ಲ. ಪರಮಾತ್ಮನಿಗೆ ಯಾವ ಸ್ಥಿರರೂಪವೂ ಇರುವುದಿಲ್ಲ. ಚಿತ್ರ



ಕಾರರು ಅವನನ್ನು ನಾನಾರೂಪದಲ್ಲಿ ಚಿತ್ರಿಸುವರು. ಅವನ ನಿಜರೂಪವನ್ನು ಯಾರಿಂದಲೂ ಚಿತ್ರಿಸಲು ಸಾಧ್ಯವಿಲ್ಲ. ಭಗವಂತ ಸುಂದರರೂಪವುಳ್ಳವನಾದರೆ ಭಕ್ತನು ಅವನ ಸೌಂದರ್ಯಕ್ಕೆ ಮಾರುಹೋಗಿ ಭಗವಂತನ ಮಹತ್ವವನ್ನೇ ಮರೆತುಬಿಡುವನು. ಗಣೇಶನು ಇದಕ್ಕೆ ಒಳ್ಳೆಯ ಉದಾಹರಣೆಯಂತಿರುವನು. ಎಂದರೆ ಅವನು ಕುರೂಪದಲ್ಲಿದ್ದರೂ ಅವನ ಮಹತ್ವವು ಅತ್ಯಧಿಕವಾಗಿರುವುದು. ಹೆಚ್ಚಿನ ಸಂಖ್ಯೆಯಲ್ಲಿ ಜನರು ಅವನನ್ನು ಆರಾಧಿಸುವರು. ಒಮ್ಮೆ ಗಣೇಶನನ್ನು ನಿಜಭಕ್ತಿಯಿಂದ ಆರಾಧಿಸಿದರೆ ಅವನ ಮನಸ್ಸು ಅತಿಸಾಮೀಪ್ಯವನ್ನು ಹೊಂದಿದಂತಾಗುವುದು. ಇದರಿಂದ ತಿಳಿಯುವುದೇನೆಂದರೆ ಸಾಂಪ್ರದಾಯಿಕವಾಗಿ ಚಿತ್ರಿಸುವಂತ ಇತರ ದೇವರುಗಳಿಗಿಂತ ಗಣೇಶನನ್ನೇ ಎಲ್ಲರೂ ಹೆಚ್ಚು ಆರಾಧಿಸುವಂತವರಾಗುವರು. ಎಂದರೆ ಭಕ್ತನು ಅವನಿಗೆ ಅತೀ ನೆಚ್ಚಿನವನಾಗುವನು, ಭಕುತಿರಸ ಉಕ್ಕಿ ಅವನನ್ನೇ ಅತಿಯಾಗಿ ಹೆಚ್ಚಿಕೊಂಡಂತಿರುವನು. ಅವನ ಸೌಂದರ್ಯವನ್ನು ನೋಡಿದರೆ ಯಾರೂ ಅವನನ್ನು ಪೂಜಿಸಲಾರರು. ಆದರೆ ಭಕ್ತನಾದವನು ಅವನ ಸಾಮರ್ಥ್ಯವನ್ನು ನೋಡುವನಲ್ಲದೆ ರೂಪವನ್ನು ನೋಡುವುದಿಲ್ಲ. ಪರಮಾತ್ಮನು ಯಾವುದೋ ಒಂದು ರೀತಿಯಲ್ಲಿ ಚಿತ್ರಿಸಲ್ಪಡುವನಾದರೆ, ಯಾವಾತನ ಭಕ್ತನು ಅತ್ಯಂತ ಸುದೀರ್ಘವಾಗಿ ಸ್ತುತಿಸುವನೋ ಭಕ್ತನ ಮನಸ್ಸು ಸ್ವಲ್ಪ ಸಮಯದನಂತರ ಅವನ ರೂಪವೇ ಆಚ್ಛೋತ್ತಿದಂತಿರುವುದು. ಆದರೆ ಅದು ಪರಮಾತ್ಮನ ನಿಜರೂಪವಲ್ಲವಷ್ಟೇ! ಗಣೇಶನ ವಿಷಯದಲ್ಲಿ ಹೇಳುವುದಾದರೆ ಭಕ್ತನ ಮಾನಸಿಕ ದೃಷ್ಟಿಯನ್ನು ಹೊಂದಿಕೊಂಡೇ ಎಲ್ಲವೂ ಇರುವುದು.

ಶ್ರೀಮತಿ ಜಯಶ್ರೀ ಜಿ. ಭಟ್

ಪುರಾಣೇತಿಹಾಸಗಳಲ್ಲಿ ಪ್ರತಿಯೊಬ್ಬ ದೇವನೂ ಅವರವರ ವಾಹನಗಳನ್ನು ಅವರವರೇ ಆರಿಸಿದರೆಂದು ದಂತಕತೆಗಳಿವೆ. ಕೆಲವರು ಪ್ರಾಣಿಗಳನ್ನು ಮತ್ತೆ ಕೆಲವರು ಪಕ್ಷಿಗಳನ್ನೂ ಆರಿಸಿಕೊಂಡಿರುವರು. ಕುಮಾರಸ್ವಾಮಿ ಅಥವಾ ಸುಬ್ರಹ್ಮಣ್ಯನೆಂದು ಕರೆಯಲ್ಪಡುವ ದೇವನು ಪಕ್ಷಿಗಳಲ್ಲಿ ಅತಿ ಸುಂದರವಾದ ನವಿಲನ್ನು ತನ್ನ ವಾಹನವಾಗಿ ಸ್ವೀಕರಿಸಿರುವನು. ಪ್ರಾಣಿಗಳ ರಾಜನಾದ ಸಿಂಹವನ್ನು ದುರ್ಗಾದೇವಿಯು ಆರಿಸಿರುವಳು. ಶ್ರೀಮನ್ನಾರಾಯಣನು ಪಕ್ಷಿಗಳ ರಾಜನಾದ ಗರುಡನನ್ನು ಆಯ್ದುಕೊಂಡಿರುವನು. ಈ ರೀತಿಯಾಗಿ ಪ್ರತಿಯೊಬ್ಬರೂ ಒಂದೊಂದು ಪ್ರಾಣಿಗಳನ್ನು ವಾಹನವಾಗಿ ಹೊಂದಿರುವರು. ಅವರವರಿಗೆ ಇಷ್ಟವಾದ ಒಂದೊಂದು ಪ್ರಾಣಿಗಳನ್ನು ಸೇರಿಸಿಕೊಂಡ ಮೇಲೆ ಗಣೇಶನು ಒಬ್ಬನೇ ಮೌನವಾಗಿ ನಿಂತುಬಿಟ್ಟನು. ಏಕೆಂದರೆ ಒಂದು ಮಂಕಾಗಿ ಕುಳಿತ ಇಲಿಯ ಹೊರತಾಗಿ ಇತರ ಎಲ್ಲ ಪ್ರಾಣಿಗಳೂ ಮುಗಿದು ಹೋದುವು.

"ಪರವಾಗಿಲ್ಲ, ನಾನು ಇಲಿಯನ್ನೇ ವಾಹನವನ್ನಾಗಿ ಸ್ವೀಕರಿಸುವೆನು" ಎಂದು ಗಣೇಶನ ಹೇಳಿಕೊಂಡನು.

"ಆನೆಯು ಇಲಿಯ ಮೇಲೆ ಕುಳಿತು ಸವಾರಿ ಮಾಡುವುದೆಂದರೇನು! ಈ ಗಣೇಶನ ಎದುರು ಈ ಇಲಿಯು ಕಣ್ಣಿಗೆ ಕಾಣಿಸುವುದಿಲ್ಲವಲ್ಲ, ಏನು ವಿಚಿತ್ರವೋ, ನಮಗೆ ಊಹಿಸಲೇ ಬಾರದು" ಎಂದು ಹೇಳಿದ ಇತರ ಎಲ್ಲ ದೇವರೂ ಗೊಳ್ಳೆಂದು ನಕ್ಕರು. ಯಾವುದನ್ನೂ ಕಿವಿಗೆ ಹಾಕಿಕೊಳ್ಳದ ಗಣೇಶನು ಇಲಿಯ ಮೇಲೆಯೇ ಸವಾರಿ ಮಾಡುತ್ತಿದ್ದನು.

ಇದರಲ್ಲಿ ಪರಿಗಣಿಸಲ್ಪಡುವ ವಿಶೇಷವೇನೆಂದರೆ – ಯಾವಾಗಲೂ ರೂಪವು ಯಾವ ರೀತಿಯೇ ಇರಲಿ, ಬಲವಾದ ಮಮತೆ ಇದ್ದರೆ ಇಲಿಯೂ ಆನೆಯನ್ನು ಹೊರಬಹುದು ಎಂದು

ಬಹುಮಟ್ಟಿಗೆ ಗಣಪತಿಯು ಕುಳಿತಿರುವ ಭಂಗಿಯಲ್ಲೇ ಇರುವುದು ಕಂಡುಬರುತ್ತದೆ. ಒಂದು ಕಾಲು ಇಳಬಿಟ್ಟು ಮತ್ತೊಂದು ಮಡಿಸಿ ತೊಡೆಯ ಮೇಲಿಟ್ಟುಕೊಂಡಂತೆ ಚಿತ್ರಿಸಿರುವುದು. ಆದರೆ ಗಣಪತಿಯ ನಿಂತಿರುವ ಭಂಗಿಗಳೂ ಉಂಟು – ಒಂದು ಬಾಗು (ಸಮಭಂಗಿ) ಎರಡು ಬಾಗು (ದ್ವಿಭಂಗ) ಮೂರು ಬಾಗು (ತ್ರಿಭಂಗ). ತಿರುಚಿರಪಳ್ಳಿಯ ಪ್ರಸಿದ್ಧ ಗಣಪತಿ ನಿಂತಿರುವ ಭಂಗಿಯಲ್ಲಿದ್ದು ಪ್ರಸನ್ನ ಗಣಪತಿ ಆಗಿದ್ದಾನೆ. ತ್ರಿಭಂಗ ರೂಪದ ಗಣಪತಿ, ನೃತ್ತ ಗಣಪತಿ ಎಂದು ಹೆಸರಿಸಲ್ಪಟ್ಟು ನಾಟ್ಯಮಾಡುವ ರೂಪದಲ್ಲಿರುವನು. ನಾಟ್ಯಗಣಪತಿಯಲ್ಲಿ ಸರ್ಪದ ಹೆಡೆಯನ್ನು ಗಣಪತಿ ಕೈಯಲ್ಲಿ ಹಿಡಿದಂತೆಯೂ, ಅದರ ಬಾಲ ನೆಲದಲ್ಲಿರುವಂತೆಯೂ ಇದೆ.

ಬಾಲಗಣಪತಿಯಾಗಿರದಲ್ಲಿ ಇತರ ಎಲ್ಲ ಗಣಪತಿಯ ರೂಪಗಳೂ ದೊಡ್ಡ ಹೊಟ್ಟೆಯನ್ನು (ಲಂಬೋದರ) ಹೊಂದಿರುತ್ತವೆ. ಸೊಂಟದವರೆಗೆ ನಗ್ನವಾಗಿದ್ದು ಸೊಂಟದ ಕೆಳಗೆ ವಸ್ತ್ರವನ್ನುಟ್ಟಿರುವುದು. ಲಂಬೋದರವನ್ನು ಸರ್ಪದಿಂದ ಬಂಧಿಸಿರುವಂತೆ ಇರುವುದು. (ಯಜ್ಞೋಪವೀತವೂ ಸರ್ಪವೇ.)

ಪದ್ಮ ಪುರಾಣವು ಮೋದಕವನ್ನು ಮಹಾಬುದ್ಧಿಯ ಸಂಕೇತವೆಂದು (ಪರಮಜ್ಞಾನ) ತಿಳಿಸುತ್ತದೆ. ಆದಿ ಶಂಕರರು ತಮ್ಮ ಪ್ರಸಿದ್ಧ ಗಣೇಶ ಪಂಚರತ್ನದಲ್ಲಿ 'ಮುದಾಕರಾತ್ತ ಮೋದಕಂ, ಸದಾ ವಿಮುಕ್ತಿದಾಯಕಂ'– ಸಂತಸದಿಂದ ಸಿಹಿಯಾದ ಕಡುಬನ್ನು ಹಿಡಿದು ಆತ್ಮಾನಂದವನ್ನು ಸಂಕೇತಿಸುತ್ತ ಅವನು ಭಕ್ತರಿಗೆ ಶಾಶ್ವತವಾದ ಮೋಕ್ಷವನ್ನು ನೀಡುತ್ತಾನೆ–ಎನ್ನುತ್ತಾರೆ.

ಕೈಗಳ ಸಂಖ್ಯೆ ಬೇರೆಯಾಗುತ್ತವೆ. ಅವು 2, 4, 6, 8, ಅಥವಾ ಹತ್ತು ಅಥವಾ ಹೆಚ್ಚು ಆಗಬಹುದು. ಬಾಲಗಣಪತಿ 4 ಕೈಗಳನ್ನು ಹೊಂದಿದ್ದರೆ ಊರ್ಧ್ವ ಗಣಪತಿಗೆ 6 ಕೈಗಳು. ಹೇರಂಬ ಗಣಪತಿಗೂ, ಭುವನೇಶ ಗಣಪತಿಗೂ 8 ಕೈಗಳು. ವೀರ ವಿಘ್ನೇಶ ಗಣಪತಿಗೆ 16 ಕೈಗಳು.

ಕೇಸ್‌ಕಾಶಿಯ ವಿಶ್ವನಾಥ ದೇವಾಲಯದ ಗಣಪತಿ ಚಕ್ರ ಪದ್ಮಗಳನ್ನು ಹೊಂದಿದ್ದಾನೆ. ಬಹುತೇಕ ವಿನಾಯಕರು ಪಾಶ, ಅಂಕುಶ, ಭಗ್ನದಂತಗಳನ್ನು ಹೊಂದಿರುವರು. ಮೇಲಿನ ಆಯುಧಗಳ ಸಾಂಕೇತಿಕತೆಯ ಬಗ್ಗೆ ವಿವಿಧ ವಿವರಣೆಗಳಿವೆ. ಪಾಶವು ಆಸೆಗಳನ್ನು ಹತ್ತಿಕ್ಕುವುದರ ಸಂಕೇತವೆಂದು ಕೆಲವರು ಹೇಳಿದರೆ, ಗಜೋಪಮ ಕಾಮಾದಿಗಳನ್ನು ಹದ್ದಿನಲ್ಲಿಡುವುದರ ಸಂಕೇತ ಅಂಕುಶವೆನ್ನುವರು.

ಗಣಪತಿಯ ವಾಹನ ಇಲಿ. ಹೇರಂಭ ಗಣಪತಿಯಲ್ಲಿ ಮಾತ್ರ ಗಣಪತಿಗೆ ಸಿಂಹವಾಹನ. ಇದರ ಬಗ್ಗೆ ಶಾರದಾತಿಲಕ ತಂತ್ರ ಹೇಳುವ ಮಾತು "......ಅವನಿಗೆ ಸಿಂಹವಾಹನ ಚಂದ್ರ ತಿಲಕ, ಸೂರ್ಯಶೋಭೆ...". ಮಹಾರಾಷ್ಟ್ರದ ಮೋರೆಗಾವ್‌ನ ಗಣಪತಿ 'ಮಯೂರೇಶ್ವರ'. ಇಲ್ಲಿನ ವಾಹನ ಸ್ಪಷ್ಟವಾಗಿ ಕಾಣದು. ಸ್ಥಳ ಪುರಾಣದಂತೆ ವಿನುತೆಯ ಕಿರಿಯ ಮಗ ಗರುಡ ಇಲ್ಲಿ ಈ ದೇವರ ಜೊತೆಯಲ್ಲಿರುವ ವಿಶೇಷ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ.

ಶಕ್ತಿ ಆರಾಧನೆಯ ಬೆಳವಣಿಗೆಯಿಂದಾಗಿ ಗಣೇಶನೂ ಸ್ತ್ರೀದೇವತೆಗಳೊಂದಿಗೆ ಇರುವಂತೆ ಚಿತ್ರಿಸಲ್ಪಟ್ಟ. ಸ್ತ್ರೀದೇವತೆಯರು ಅವನ ತೊಡೆಯನ್ನೇರಿದಂತೆ ಚಿತ್ರಿಸಲಾಯಿತು. ಶಕ್ತಿ ಉಪಾಸಕರು ಐದು ರೂಪಗಳನ್ನು ಗುರುತಿಸಿದರು – ಮಹಾಗಣಪತಿ, ಊರ್ಧ್ವಗಣಪತಿ, ಪಿಂಗಳ ಗಣಪತಿ, ಲಕ್ಷ್ಮಿಗಣಪತಿ, ಉಚ್ಛಿಷ್ಟ ಗಣಪತಿ. ಮಹಾಗಣಪತಿಯಲ್ಲಿ ದೇವತೆ ಆತನ ತೊಡೆಯಮೇಲೆ ಕುಳಿತಿದ್ದರೆ, ಲಕ್ಷ್ಮಿಗಣಪತಿಯಲ್ಲಿ ಆಲಿಂಗನದಲ್ಲಿದ್ದಂತೆ ಇದೆ. ಪಿಂಗಳಗಣಪತಿಯಲ್ಲಿ ಲಕ್ಷ್ಮಿಯು ಆತನ ಪಕ್ಕದಲ್ಲಿ ಕುಳಿತಿದ್ದರೆ, ಊರ್ಧ್ವಗಣಪತಿಯಲ್ಲಿ ಆಕೆ ಆತನ ಪುಷ್ಠಭಾಗದಲ್ಲಿರುವುದು ಚಿತ್ರಿತವಾಗಿದೆ. ಮೇಲಿನ ರೂಪಗಳಿಗೆ ಬದಲಾಗಿ ಕೆಲ ಶಕ್ತಿ ಉಪಾಸಕರು ಆರು ರೀತಿಯ ತುಸುಭಿನ್ನ ಗಣಪತಿಗಳನ್ನು ಗುರುತಿಸುವರು. ಮಹಾಗಣಪತಿ ಉಚ್ಛಿಷ್ಟ ಗಣಪತಿ, ಹರಿದ್ರಗಣಪತಿ, ನವನೀತ ಗಣಪತಿ, ಸ್ವರ್ಣಗಣಪತಿ ಹಾಗೂ ಸಂತಾನ ಗಣಪತಿ.

ಮೇಲಿನ ರೂಪಗಳಲ್ಲಿ ಬ್ರಹ್ಮಚಾರಿಯಾದ ಗಣಪತಿಯನ್ನು ವಿವಿಧ ಸ್ತ್ರೀಮೂರ್ತಿಗಳೊಂದಿಗೆ ಚಿತ್ರೀಕರಿಸಿದ್ದರೆ, ಇತರೆಡೆಯಲ್ಲಿ ಗಣಪತಿಯನ್ನು ಇಬ್ಬರು ಪತ್ನಿಯರೊಂದಿಗೆ (ಸಿದ್ಧಿ–ಬುದ್ಧಿ)– ಚಿತ್ರಿಸಲಾಗಿದೆ. ಶಿವಪುರಾಣವು ಹೇಳುವಂತೆ, ತ್ರೈಲೋಕ ಪ್ರದಕ್ಷಿಣೆಯಲ್ಲಿ ಸುಬ್ರಹ್ಮಣ್ಯ ಲೋಕಗಳ ಪರಿಭ್ರಮಣೆಯಲ್ಲಿರುವಾಗ, ಗಣಪತಿಯು ಶಿವಪಾರ್ವತಿಯರನ್ನು ಬಳಸಿ ಬಂದು ಅದೇ ಫಲವನ್ನು ಪಡೆದು ಗೆದ್ದ. ಶಿವಪಾರ್ವತಿಯರು ಪ್ರಸನ್ನರಾಗಿ ಸಿದ್ಧಿಬುದ್ಧಿಯರನ್ನು ಗಣಪತಿಗೆ ನೀಡಿದರು. (ಅವರಿಗೆ ಕ್ಷೇಮ ಅಭ್ಯುದಯ – ಮಕ್ಕಳು) ಇಲ್ಲಿ ಸಿದ್ಧಿ ಬುದ್ಧಿಯರೂ ಕ್ಷೇಮ ಅಭ್ಯುದಯಗಳೂ ಸಾಂಕೇತಿಕವೂ ಆಗಬಹುದು. ತಂತ್ರಶಾಸ್ತ್ರದಂತೆ ಮೂಲಾಧಾರ ಚಕ್ರದ ಅಭಿಮಾನಿ ದೇವತೆ ಗಣಪತಿ ಎಂಬುದು ಗಮನಾರ್ಹ. ಇಲ್ಲಿಂದಲೇ ಕುಂಡಲಿನಿಯನ್ನು ಜಾಗೃತಗೊಳಿಸ ಬೇಕು. ಹೀಗಾಗಿ ಸುಪ್ತಪ್ರಜ್ಞೆಯನ್ನು ಎಚ್ಚರಗೊಳಿಸುವುದನ್ನು ಈ ರೂಪ ಪ್ರಾಯಶಃ ಪ್ರತಿನಿಧಿಸುವುದು.

ಸಾಮಾನ್ಯವಾಗಿ ತಿಳಿಯದ ಗಣಪತಿಯ ಸ್ತ್ರೀ ರೂಪವೂ ಇರುವುದೆಂದು ಹಲವರು ನಂಬುತ್ತಾರೆ. ಜಬಲಪುರದ ಬಳಿ ಗಣೇಶಾಣಿ ಎಂಬ ಗಣೇಶನ ಸ್ತ್ರೀರೂಪವಿದೆ. ಗಣೇಶನಂತೆ ಅಲ್ಲದೆ ಈಕೆಗೆ ತೆಳುವಾದ ಸೊಂಟ. ಈ ಸ್ತ್ರೀಮೂರ್ತಿ ಒಂದು ಕಾಲನ್ನು ಇಳಿಬಿಟ್ಟು ಒಂದನ್ನು ಮಡಿಸಿಟ್ಟುಕೊಂಡಂತಿದೆ. ಆದರೆ ಈ ರೂಪದ ಬಗ್ಗೆ ಜನಪ್ರಿಯ ಪುರಾಣಸಾಹಿತ್ಯದ ಸಾಕ್ಷಿ ಕಷ್ಟ.

ಕೊನೆಯದಾಗಿ ಹೇಳಬಹುದಾದ್ದೆಂದರೆ ಗಣಪತಿಯ ರೂಪ ಅಪ್ರಮುಖ. ನಿಜವಾದ ಆರಾಧನೆ ರೂಪವನ್ನು ಮೀರಿದ್ದು. ಸ್ವತಃ ಗಣಪತಿ ರೂಪಾತೀತ, ಆದಿಶಂಕರರು ಗಣೇಶ ಪಂಚರತ್ನದಲ್ಲಿ ಹೇಳುವಂತೆ ಅಚಿಂತ್ಯ ರೂಪವು, ಅಂತಃಹೀನಂ, ಅಂತರಾಯ ಕಿಂತನಂ. ಅವನ ರೂಪವನ್ನು ಭಾವಿಸಲು ಸಾಧ್ಯವಿಲ್ಲ. ಆತ ನಿತ್ಯ, ಆತ ಶೋಕನಾಶಕ.

**ಶ್ರೀ ಎಂ. ಎಸ್. ರಾಜಾಜೀ**
**ಕೃಪೆ: ಹಿಂದೂ – 26 ಆಗಸ್ಟ್ 1984.**
**ಅನುವಾದ - ಬಿ. ಎನ್. ಎಸ್.**

---



# ಹುಲುಗನಮುರಡಿ ವೆಂಕಟರಮಣ

ಶ್ರೀ ಮುಕುಂದ ಪುರೋಹಿತ

ಪುರಾತನ ದೇಗುಲವೆಂದು ನಿಚ್ಚಳವಾಗಿ ಹೇಳಬಹುದಾದ ಕುರುಹುಗಳನ್ನು ಹೊಂದಿರುವ ದೇವಾಲಯಗಳಲ್ಲಿ ಹುಲಗನ ಮುರಡಿಯ ವೆಂಕಟೇಶ್ವರನ ತಾಣವೂ ಒಂದು. ಈ ಸ್ಥಳ ಶ್ರೀಮದ್ದಕ್ಷಿಣ ಶೇಷಾದ್ರಿಯೆಂದು ಪ್ರಸಿದ್ಧವಾಗಿದೆ. ಹುಲಗನಮುರಡಿ (ವ್ಯಾಘ್ರಾಚಲ) ಮೈಸೂರು ಸಂಸ್ಥಾನದ ಗುಂಡ್ಲುಪೇಟೆ ತಾಲ್ಲೂಕು ತೆರಕಣಾಂಬಿ (ಹಿಂದಿನ ಹೆಸರು ತ್ರಿಕದಂಬಪುರ) ಗೆ ಮೂರು ಮೈಲಿ ದೂರದಲ್ಲಿ ಸರ್ಪಾಕೃತಿ ಯಲ್ಲಿ ಶಿಖರದ ಮೇಲೆ ಕಂಗೊಳಿಸುತ್ತಿದೆ.

ಕೃತಯುಗದಲ್ಲಿ ಶೇಷಾದ್ರಿಯೆಂದೂ, ತ್ರೇತಾಯುಗದಲ್ಲಿ ಕನಕಾದ್ರಿಯೆಂದು, ದ್ವಾಪರಯುಗದಲ್ಲಿ ವೆಂಕಟಾದ್ರಿಯೆಂದೂ, ಕಲಿಯುಗದಲ್ಲಿ ವ್ಯಾಘ್ರಾದ್ರಿ ಎಂದು ಹೆಸರುಗಳುಂಟು. ಈ ಕ್ಷೇತ್ರದಲ್ಲಿ ಶ್ರೀರಾಮ, ಅಗಸ್ತ್ಯಮುನಿ, ಮಾಂಡವ್ಯ ಋಷಿ ಹಾಗೂ ಪಾಂಡವರು ಬಂದಿದ್ದ ಕುರುಹುಗಳು ಗೋಚರಿಸುತ್ತವೆ. ಮೇಲುಕೋಟೆಯಲ್ಲಿ ಶ್ರೀರಾಮ ಬಂದಿದ್ದುದಕ್ಕೆ ಕುರುಹಾಗಿ ಧನುಷ್ಕೋಟಿ ಇರುವಂತೆ, ಇಲ್ಲಿಯೂ ಇದೆ. ಶ್ರೀರಾಮ ಧನುಸ್ಸಿನಿಂದ ನೀರು ತರಿಸಿದನೆಂದು ಹೇಳುವ ಕುರುಹು ಗೋಚರಿಸುತ್ತದೆ. ಮಾಂಡವ್ಯ ಋಷಿಗೆ ಶ್ರೀ ವೆಂಕಟೇಶ ಪ್ರತ್ಯಕ್ಷನಾಗಿ ಅವರ ಪ್ರಾರ್ಥನೆಯಂತೆ ಶ್ರೀ ಭೂದೇವಿ, ನೀಳಾದೇವಿಯೊಡನೆ ನಿಂತನೆಂದು ಪೌರಾಣಿಕ ಆಧಾರದಿಂದ ತಿಳಿಯಬಹುದು.

ಹಿಂದೆ ಪಾಳಯಪಟ್ಟದ ರಾಜ್ಯದ ರಾಜಧಾನಿಯಾಗಿದ್ದ ಇಲ್ಲಿ ಮುಸಲ್ಮಾನರ ಹಾವಳಿಯಿಂದ ಅನೇಕ ವಿಗ್ರಹಗಳು ರಕ್ಷಣೆಗಾಗಿ ಅಜ್ಞಾತವಾಸದಲ್ಲಿದ್ದು, ನಂತರ ಸುರಕ್ಷಿತವಾಗಿ ಕಂಗೊಳಿಸಿದವೆಂದು ಐತಿಹಾಸಿಕ ಆಧಾರದಿಂದ ತಿಳಿಯಬಹುದು. ವ್ಯಾಘ್ರಾಸುರನೆಂಬ ರಾಕ್ಷಸನನ್ನು ಕೊಂದು ಅವನ ಶಾಪವಿಮೋಚನೆ ಮಾಡಿ ನೆಲಸಿದ ಕ್ಷೇತ್ರವಾದ್ದರಿಂದ ಇದಕ್ಕೆ "ವ್ಯಾಘ್ರಾಚಲ" ಎಂದು ಹೆಸರು ಬಂದಿತೆಂದು ಕೆಲವಾರು ಆಧಾರಗಳಿಂದ ತಿಳಿಯಬಹುದು.

ಮೂರು ಬೆಟ್ಟಗಳನ್ನು ಹಂತಹಂತವಾಗಿ ಕಣಿವೆಯಾಕಾರದಲ್ಲಿ ಸುತ್ತಿ ಹೋದರೆ ದೇವಸ್ಥಾನ ಸಿಗುತ್ತದೆ. ವಿಶಾಲವಾದ ಅಂಗಳದಲ್ಲಿ ಪುರಾತನವಾದ ಬಾಗಿಲುಗಳನ್ನೊಳಗೊಂಡು ಇರುವ ದೇವಾಲಯದ ಮೇಲಿನ ಗೋಪುರದಲ್ಲಿ ರಾಮ, ಕೃಷ್ಣ, ವಿಷ್ಣು, ಲಕ್ಷ್ಮಿಯ ವಿಗ್ರಹಗಳನ್ನು ಕೆತ್ತಿರುವುದು ಕಾಣುತ್ತದೆ. ದೇವಾಲಯದ ಮುಂದೊಂದು ಬಲಿಪೀಠ. ದೇವಾಲಯ ಹೊಕ್ಕರೆ ಪ್ರಾರಂಭದಲ್ಲಿ ಸಿಗುವ ಪ್ರಾಂಗಣದಲ್ಲಿ ದಶಾವತಾರದ ಪಟಲಗಳು, ಮುರಿದ ರಥದ ಅವಶೇಷ, ಸ್ವಾಮಿ ಅಯ್ಯಪ್ಪನ ಪಟಲ, ದೇವಸ್ಥಾನದ ಶಾತ್ತುಮೊರೈ (ಆರಾಧನೆಯ ಸಮಯ) ವೇಳೆಯಲ್ಲಿ ಬಾರಿಸುವ ಬೃಹತ್‌ಗಂಟೆ, ಹಾಗೂ ಹಿತ್ತಾಳೆಯ ಗರುಡಗಂಬ ಮುಂತಾದವು ಕಂಗೊಳಿಸುತ್ತದೆ.

ಸುಮಾರು ನಾಲ್ಕು ದ್ವಾರಗಳನ್ನು ದಾಟಿ ಹೋದರೆ ದೇವರ ಗರ್ಭಗುಡಿ. ಪೂರ್ವಾಭಿಮುಖವಾಗಿರುವ ದೇವರ ಕೈಯಲ್ಲಿ ಶಂಖ, ಚಕ್ರ, ಗದಾಧಾರಿಯಾಗಿ ಅಭಯಹಸ್ತದಲ್ಲಿರುವ ವೆಂಕಟೇಶ್ವರನ ವಿಗ್ರಹ. ನೋಡಲು ನಯನ ಮನೋಹರ. ಕಣ್ತಣಿಸುವ ಹಾರವನ್ನು ಧರಿಸಿಕೊಂಡು ಹೂವಿನ ರಾಶಿರಾಶಿಯೊಂದಿಗೆ ಅಲಂಕರಿಸಿಕೊಂಡು ದರ್ಶನ ನೀಡುತ್ತಿರುವ ಹುಲಗನಮುರಡಿಯ ವೆಂಕಟೇಶ್ವರನ ದರ್ಶನ ನಿಜಕ್ಕೂ ಅತ್ಯಮೋಘ. ದೇವಾಲಯದ ಮೂರು ದ್ವಾರಗಳಲ್ಲೂ ದ್ವಾರಪಾಲಕರು ನಿಂತಿದ್ದಾರೆ. ದೇವಾಲಯದ ಒಳಗೆ ವೈಕುಂಠನಾಥನ ದರ್ಶನ. ಜೊತೆಗೆ ರಾಮಾನುಜಾಚಾರ್ಯ, ವೇದಾಂತದೇಶಿಕರ್ ಮುಂತಾದ ಆಚಾರ್ಯರುಗಳ ವಿಗ್ರಹಗಳು ಎದುರಿನಲ್ಲಿ ವೆಂಕಟೇಶ್ವರನ ಉತ್ಸವ ಮೂರ್ತಿ. ದೇವರ ಎಡಪಾರ್ಶ್ವದಲ್ಲಿ ಆಂಡಾಳ್ ಹಾಗೂ ಬಲಪಾರ್ಶ್ವದಲ್ಲಿ ರಾಧ, ಪದ್ಮಾವತೀ ವಿಗ್ರಹಗಳು ಕಂಗೊಳಿಸುತ್ತಿವೆ. ಗರ್ಭಗುಡಿಯಲ್ಲಿ ಮಾಂಡವ್ಯ ಋಷಿಯ ವಿಗ್ರಹವನ್ನು ಅರ್ಚಕರು ತೋರಿಸಿದರು.

ದೇವಾಲಯದ ಹೊರ ಅಂಗಳದಲ್ಲಿ ಎಡಪಾರ್ಶ್ವದಲ್ಲಿ ಬಂಡೆ (ಕಲ್ಲಿ)ಯಲ್ಲಿ ಬೃಹತ್ ಆಂಜನೇಯನ ಕೆತ್ತನೆ. ಅಲ್ಲಿಯೇ ನಾಗಪ್ರತಿಷ್ಠೆಯೂ ಆಗಿದೆ. ದೇವಾಲಯದ ಹಿಂಭಾಗ ಪ್ರಶಾಂತವಾದ ವಾತಾವರಣ,

ಅರಳೀಮರ ಮಂಟಪಗಳು ಹಾಗೂ ಕೊಳಗಳು ಇವೆಲ್ಲ ಪ್ರಕೃತಿಯ ಚೆಲುವನ್ನು ಬೀರಿ ಕಂಗೊಳಿಸುತ್ತಿವೆ. ಅಲ್ಲೊಂದು ಜಾರು ಕಲ್ಲು ಇದೆ. ಅದಕ್ಕೆ "ದೊಣೆ" ಎಂತಲೂ ಕರೆಯುತ್ತಾರೆ. ಅದು ಬಾಣದ ಗುರ್ತನ್ನೊಳಗೊಂಡು ನೀರು ಸದಾ ಹರಿಯುತ್ತಿರುತ್ತದೆ. (ಅದೇ ರಾಮ ಬಾಣ ಬಿಟ್ಟು ನೀರು ಹರಿಸಿದ ಸ್ಥಳ ಎಂದು ಹೇಳುತ್ತಾರೆ) ಅಲ್ಲಿ ಬಹಳ ಆಳವಿದೆ ಎನ್ನುವವರೂ ಉಂಟು; ಜಾರಿದರೆ ಮೂಲವೇ ತಿಳಿಯದಂತಹುದು. ಯಾರೇ ಬಂದರೂ ತುಂಬಾ ಎಚ್ಚರಿಕೆ ವಹಿಸಬೇಕಾದ್ದು ಅತ್ಯವಶ್ಯಕ.

ದೇವಾಲಯ ಪುರಾತನವಾದರೂ ಕೆಲವಾರು ಕೋಣೆಗಳು ಅಚ್ಚುಕಟ್ಟಾಗಿ ಇಂದಿಗೂ ಉಪಯೋಗಕ್ಕೆ ಬರುತ್ತಲಿರುವುದು ಸಂತೋಷದ ವಿಚಾರ. ಪಾಕಶಾಸ್ತ್ರದ ಕೋಣೆ. ಊಟದ ಮನೆ, ಮುಂತಾದವು ಇಂದಿಗೂ ತನ್ನತನವನ್ನು ಉಳಿಸಿಕೊಂಡು, ಇಲ್ಲಿಗೆ ಬರುವ ಯಾತ್ರಿಕರಿಗೆ ಅನುಕೂಲವಾಗಿದೆ. ದೇವಾಲಯದ ಒಳಗಿನ ಚಪ್ಪಡಿಗಳು ಪುರಾತನವೆಂದು ನೋಡಿದಾಕ್ಷಣ ಹೇಳಬಹುದು. ದೇವಸ್ಥಾನದ ಇನ್ನೊಂದು ಕೋಣೆಯಲ್ಲಿ ಹಲವಾರು ಉತ್ಸವ ಮೂರ್ತಿಗಳು ಹಾಗೂ ವಾಹನಗಳು ರಾರಾಜಿಸುತ್ತಿವೆ. ಜನವರಿಯ ಸಂಕ್ರಾಂತಿಯಂದು ಅಲ್ಲಿ ಜಾತ್ರೆ ನಡೆಯುತ್ತದೆ. ವೈಭಯುತವಾಗಿ ನಡೆಯುವ ಜಾತ್ರೆಗೆ ಸುತ್ತಮುತ್ತಲಿನ ಅನೇಕ ಜನ ಸೇರುತ್ತಾರೆ. ದೇವಾಲಯದಲ್ಲಿ ವೈಭವವಾಗಿ ಗರುಡೋತ್ಸವ, ವ್ಯಾಘ್ರೋತ್ಸವ ಗಜವಾಹನೋತ್ಸವ ಮುಂತಾದವು ಬಹಳ ಉತ್ಸಾಹದಿಂದ ನಡೆಯುತ್ತದೆ.

ಆಂಧ್ರದ ತಿರುಪತಿಯ ಶ್ರೀನಿವಾಸ "ಸಪ್ತಗಿರಿ"ಯ ಒಡೆಯನಾದರೆ, ಹುಲಗನಮರಡಿಯ ಶ್ರೀನಿವಾಸ "ಮೂರು ಬೆಟ್ಟಗಳ" ಒಡೆಯ. ಪ್ರಕೃತಿಯ ರಮ್ಯ ತಾಣದಲ್ಲಿ ಕಂಗೊಳಿಸುತ್ತಿರುವ ಈ ಕ್ಷೇತ್ರ ಇಂದು ಅಷ್ಟಾಗಿ ಯಾರ ಕಣ್ಣಿಗೂ ಬಿದ್ದಂತೆ ಕಾಣುತ್ತಿಲ್ಲ, ಎಂದರೆ ಆಶ್ಚರ್ಯವಾಗದಿರಲಾರದು. ಈ ದೇವಾಲಯದ ಸುತ್ತಮುತ್ತ ಹಿಂದೆ ಹುಲಿ (ವ್ಯಾಘ್ರ) ಹಾಗೂ ಕರಡಿಗಳು ಓಡಾಡುತ್ತಲಿತ್ತೆಂದು ಕಂಡವರು ಹೇಳುತ್ತಾರೆ. ಆದರೆ ಆ ಹುಲಿ ಮನುಷ್ಯರನ್ನು ನೋಡಿಯೂ ಏನೂ ಮಾಡದೆ ಹಾಗೆಯೇ ಹೋಗಿರುವುದು ಪವಾಡ ಎಂದು ಅನುಭವಿಗಳು ಹೇಳುತ್ತಾರೆ.

ಇದೀಗ ದೇವಸ್ಥಾನ ನಶಿಸುತ್ತಿದೆ ಎಂದು ಕೆಲವರ ಕೊರಗು. ಪುರಾತನ ದೇವಾಲಯವನ್ನು ಉಳಿಸಬೇಕೆಂದು ಅಲ್ಲಿಯ ಕೆಲವರು ಹಿರಿಯರು, ಸಂಬಂಧಪಟ್ಟ ಭಕ್ತರು ಒಂದುಗೂಡಿ ಟ್ರಸ್ಟ್ ಒಂದನ್ನು ಮಾಡಿ ನಿಧಿ ಸಂಗ್ರಹಿಸುತ್ತಿದ್ದಾರೆ. ಮಾಮೂಲಿನ ಉತ್ಸವ ಕೈಂಕರ್ಯ ಮುಂತಾದವುಗಳು ತಪ್ಪದೆ ನಡೆದು ದೇವಾಲಯವನ್ನು ಹೆಚ್ಚು ಅಭಿವೃದ್ಧಿ ಪಡಿಸಬೇಕೆಂದು ಕೆಲವರ ಪ್ರಯತ್ನಗಳು ಶ್ಲಾಘನೀಯ. ಈ ದಿಶೆಯಲ್ಲಿ ಬೆಂಗಳೂರಿನ ರಾಜಾಜಿನಗರದಲ್ಲಿ ಒಂದು ಪ್ರಧಾನ ಕಚೇರಿಯೂ ಇದೆ. ಈ ಪ್ರಯತ್ನಗಳೆಲ್ಲ ಕೈಗೊಂಡಿದ್ದೇ ಆದರೆ ತುಂಬಾ ಸಾರ್ಥಕ. ಸರ್ಕಾರವೂ ಪುರಜನರೂ ದೇಗುಲವನ್ನು ಉಳಿಸಲು ಹೆಚ್ಚು ಪ್ರಯತ್ನಪಟ್ಟರೆ ಈ ಕಾರ್ಯ ಅಂತಹ ಅಗಾಧವೇನಲ್ಲ. ಈ ದಿಶೆಯಲ್ಲಿ ಎಲ್ಲರ ಸಂಘಟಿತ ಪ್ರಯತ್ನ ಕೈಗೊಡಲೆಂದು ತುಂಬು ಮನದಿಂದ ಹಾರೈಸೋಣ.

---

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು:

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**

**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**

**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**

**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**

**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-00, ಬೆಳಗ್ಗೆ 10-00, ಸಂಜೆ 3-00

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ, ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

ಪಾರ್ವತಿ : ನಂದೀ, ಎಲೋ ನಂದಿ, ನಾನು ಸ್ನಾನಕ್ಕೆ ಹೊರಟಿದ್ದೇನೆ. ಯಾರನ್ನೂ ಒಳಗೆ ಬಿಡಬೇಡ, ತಿಳಿಯಿತೇ?

ನಂದಿ : ಅಪ್ಪಣೆ ಅಮ್ಮಾ, ಯಾರನ್ನೂ ಒಳಗೆ ಬಿಡುವದಿಲ್ಲ. ತಾವು ನಿಶ್ಚಿಂತೆಯಿಂದಿರಿ, ಅಮ್ಮಾ.

(ಪಾರ್ವತಿ ನಿಷ್ಕ್ರಮಿಸುವಳು. ಅವಳು ಸ್ನಾನ ಮಾಡುವ ಸದ್ದು ಆತ್ತಿಂದಿತ್ತ ನಂದಿ ಶತಪಥ ತಿರುಗುತ್ತಿದ್ದಾನೆ. ಆಗ ಶಿವನ ಆಗಮನ)

ನಂದಿ : (ಸ್ವಗತ) ಇದೇನಿದು! ಸ್ವತಃ ಮಹದೇವರೇ ಬರುತ್ತಿದ್ದಾರೆ! ಅವರ ಮನೆಗೇ ಅವರನ್ನು ಹೋಗದಂತೆ ತಡೆ ನಾನೇನು ಮಾಡಲಿ? ಇದೊಳ್ಳೇ ಫಜೀತಿ ಬಂತಲ್ಲಾ!

ಶಿವ : ಇಲ್ಲೇನು ಮಾಡುತ್ತಿರುವಯೋ ನಂದಿ? ದೇವಿಯವರು ಏನು ನಡೆಸಿದ್ದಾರೆ? ಸರಿ, ದಾರಿ ಬಿಡು (ಎನ್ನುತ್ತ ಒಳಗೆ ಹೋಗುವನು.)

ಪಾರ್ವತಿ : ಇದೇನಿದು? ನೀವು ಒಳಗೆ ಹೇಗೆ ಬಂದಿರಿ ದೇವಾ? ನಂದಿ ಬಾಗಿಲ ಬಳಿ ಇಲ್ಲವೋ ಹೇಗೇ.

ಶಿವ : ಅವನು ಬಾಗಿಲ ಬಳಿಯೇ ಇದ್ದಾನೆ. ಯಾಕೆ? ನಾನು ಒಳಗೆ ಬರಬಾರದಿತ್ತೊ? ಇದು ನಮ್ಮ ಮನೆ, ನಾನು ನಿನ್ನ ಪತಿ. ನಂದಿ ನನ್ನನ್ನೆಂತು ತಡೆಯಬಲ್ಲ.

ಪಾರ್ವತಿ : ನೀವು ನನ್ನ ಪತಿಯಲ್ಲವೆಂದವರಾರು? ಆದರೂ ನಂದಿ ನನ್ನ ಮಾತನ್ನು ಮೀರಿದಂತಾಯಿತು? ಅವನು ನಿಮ್ಮನ್ನು ಹೀಗೆ ಒಳಗೆ ಬರಲು ಬಿಟ್ಟದ್ದು ಅವನ ತಪ್ಪಲ್ಲವೇ?.

ಶಿವ : ಹ್ಹಾ! ಹ್ಹಾ!! ಹ್ಹಾ!!! ನಂದಿ ನನ್ನ ಆಪ್ತ ಸೇವಕ. ಅವನು ನನಗೆ ವಿಧೇಯನಾಗಿರಬೇಕಾದ್ದು ಅವನ ಕರ್ತವ್ಯವಲ್ಲವೇ ದೇವಿ?

(ಮತ್ತೆ ಮಂದಹಾಸದಿಂದ ನಗುತ್ತ ಶಿವ ನಿರ್ಗಮಿಸುವನು.)

ಪಾರ್ವತಿ : (ಸ್ವಗತ) ನನಗೆ ಮಾತ್ರವೇ ವಿಧೇಯನಾದ ಒಬ್ಬ ಸೇವಕ ನನಗೂ ಇರಲೇ ಬೇಕು. ನಿಜ, ನಾನೇ ಒಂದು ಗಣವನ್ನು ಸೃಷ್ಟಿ ಮಾಡಬೇಕು. ಈಗಿರುವ ಗಣಗಳಲ್ಲಿ ಯಾರೂ ನನ್ನವರಿಲ್ಲ.

(ಕತ್ತಲೆ, ಆಕೆ ತನ್ನ ಮೈಗೆ ಪೂಸಿದ ಚಂದನದಿಂದ ಒಬ್ಬ ಬಾಲಕನನ್ನು ಮಾಡುವಳು, ಪ್ರಕಾಶ.)

ಎಂಥ ಚೆಲುವ! ಎಷ್ಟೊಂದು ಬಲಿಷ್ಠ!! ಬಾ ಮಗೂ, ನೀನು ನನ್ನ ಮಗ. ಇಲ್ಲಿ ನನ್ನ ಮಾತನ್ನು ಮಾತ್ರವೇ ನಡೆಸುವ ಎನ್ನುವ ಬೇರಾರೂ ನನಗಿರಲಿಲ್ಲ. ಇಂದಿನಿಂದ ನೀನಿಲ್ಲಿ ಕಾವಲು ನಿಲ್ಲು. ಅನುಮತಿ ಇಲ್ಲದೇ ಯಾರನ್ನೂ ಒಳಕ್ಕೆ ಬಿಡಬೇಡ.

(ಮುಂದಿನ ಪುಟದಲ್ಲಿ)



ಸಾಂಪ್ರದಾಯಕವಾಗಿ ಹಿಂದುಗಳೆಲ್ಲರೂ ಯಾವುದೇ ಹೊಸ ಕೆಲಸಕ್ಕೆ ತೊಡಗುವ ಮುನ್ನ, "ವಿಘ್ನನಿವಾರಕ–ದೇವತೆ" ಎನಿಸಿದ ಗಣೇಶನ ಪೂಜೆಯನ್ನು ಮಾಡುವುದು ಸರ್ವ ವಿದಿತ. ಭಾರತದ ಅನೇಕ ಕಡೆಗಳಲ್ಲಿ ಗಣೇಶೋತ್ಸವವನ್ನು ಸಾರ್ವಜನಿಕವಾಗಿ ಆಚರಿಸಲಾಗುತ್ತಿದೆ. ಸಾರ್ವಜನಿಕರೇ ಉತ್ಸಾಹದಿಂದ ಮುಂದೆ ಬಂದು ವಂತಿಗೆ ಕೂಡಿಸಿ ಬಲು ವಿಜೃಂಭಣೆಯಿಂದ ಆಚರಿಸುವ ಈ ಹಬ್ಬ, ಲೋಕಮಾನ್ಯ ತಿಲಕರೇ ಮುಂತಾದ ಮುಖಂಡರ ಪ್ರಯತ್ನದಿಂದಾಗಿ, ರಾಷ್ಟ್ರೀಯ ಹಬ್ಬದಂತೆ, ಒಕ್ಕಟ್ಟು ಸಹನೆ, ಸಹಕಾರಗಳಂಥ ಸದ್ಗುಣಗಳನ್ನು ಜನರಲ್ಲಿ ಬೆಳೆಸಲು ಅನುಕೂಲವಾಗಿದೆ.

ಶಿವಗಣ ಪ್ರಮುಖನಾದ ಈ ದೇವತೆಯನ್ನು ಕುರಿತು ಅನೇಕ ಕಥೆಗಳಿವೆ. ಬೇರೆ ಬೇರೆ ಪುರಾಣಗಳಲ್ಲಿ ಒಂದೇ ಕಥೆಯ ರೂಪಾಂತರಗಳೂ ಬಂದಿವೆ. ಗಣೇಶನ ಕುರಿತಾದ ಕಥೆಗಳಲ್ಲಿ, ಹಾಡುಗಳಲ್ಲಿ ಅವನ ವರ್ಣನೆ ಇದೆ. ಆತನಿಗೆ ಆನೆಯ ಮುಖ ದೊಡ್ಡ ಹೊಟ್ಟೆ,

# ವಿನಾಯಕ ಜನನ

ನಾಲ್ಕು ಕೈಗಳು ಇತ್ಯಾದಿ. ಇವುಗಳಲ್ಲಿ ಪಾಶಾಂಕುಶಗಳಂತಹ ದೈವೀ ಲಾಂಛನಗಳಿವೆ. ಆತನ ವಾಹನ ಪುಟ್ಟ ಮೂಷಿಕ. ಈ ವಿವಿಧ ಲಾಂಛನಗಳಿಗೆ ವಿಶಿಷ್ಟ ಅರ್ಥಗಳನ್ನೂ ಹೇಳುತ್ತಾರೆ. ಅವುಗಳಲ್ಲಿ ಆನೆಯ ಮುಖವನ್ನು ಕುರಿತದ್ದು; – ದೇಹಬಲಕ್ಕೂ, ಬುದ್ಧಿ ಶಕ್ತಿಗೂ ಸಂಕೇತವಾಗಿದೆ; ಮೂಷಿಕ ಚುರುಕಿನ ನಡೆಗೆ ಸಂಕೇತ, ಇತ್ಯಾದಿ. ಪ್ರಸ್ತುತ ಕಥೆಯನ್ನು ಶಿವಪುರಾಣದಿಂದ ಆಯ್ದುಕೊಂಡು ನಾಟಕರೂಪದಲ್ಲಿ ಬರೆಯಲಾಗಿದೆ.

ಕೈಲಾಸ ಪರ್ವತ ಶಿವ–ಪಾರ್ವತಿಯರ ನಿವಾಸವೆಂಬುದು ಎಲ್ಲರಿಗೂ ಗೊತ್ತೇ ಇದೆ. ಈ ಮನೆಯಲ್ಲಿ ಎರಡು ಭಾಗ, – ಒಂದು ಶಿವನದು, ಇನ್ನೊಂದು ಪಾರ್ವತಿಯದು. ಶಿವ ತನ್ನಿಷ್ಟ ಬಂದಾಗ ಪಾರ್ವತಿಯ ಮನೆಯ ಭಾಗಕ್ಕೆ ಬರುವವ. ತನ್ನ ಸ್ವಸ್ಥಕ್ಕೆ ಇರಲು ಅವಕಾಶವೇ ಇಲ್ಲವೆಂದು ಪಾರ್ವತಿಯ ಕೊರಗು. ಪಾರ್ವತಿಯ ಏಕಾಂತದ ರಕ್ಷಣೋಪಾಯವಾಗಿ ಜನಿಸಿದ ಮಗುವೇ ಶ್ರೀಗಣೇಶ. ಆತ ಇಂದು ದೇವತೆಗಳಲ್ಲೆಲ್ಲಾ ಅತ್ಯಂತ ಜನಪ್ರಿಯನಾಗಿದ್ದಾನೆ. ★

ಮಗು : ಅಪ್ಪಣೆ ಅಮ್ಮಾ ,ನಿಮ್ಮ ಆಜ್ಞೆಯನ್ನು ಶಿರಸಾ ವಹಿಸುತ್ತೇನೆ

(ಪಾರ್ವತಿಯು ಸಂತಸದಿಂದ ಅಲ್ಲಿಂದ ನಿರ್ಗಮಿಸುವಳು. ಶಿವನ ಆಗಮನ)

ಶಿವ : (ಸ್ವಗತ) ಯಾರು ಈ ಸುಂದರ ಬಾಲಕ? ಈ ಮೊದಲು ನಾನು ಇವನನ್ನು ಕಂಡೇ ಇಲ್ಲ! (ಒಳಗೆ ಹೋಗಲು ಯತ್ನಿಸುವನು.)

ಮಗು : ನಿಲ್ಲಿ ನಿಲ್ಲಿ, ನನ್ನ ಅಮ್ಮನ ಅಪ್ಪಣೆ ಇಲ್ಲದೇ ಯಾರಿಗೂ ಪ್ರವೇಶ ವಿಲ್ಲ.

ಶಿವ : ಹುಚ್ಚ! ನಿನಗೆ ನಾನಾರೆಂಬುದು ಗೊತ್ತೆ?ತೊಲಗಾಚೆ.

ಮಗು : ಸಾಧ್ಯವಿಲ್ಲ ನಿಮ್ಮನ್ನು ನಾನು ಒಳಗೆ ಬಿಡಲಾರೆ. ನಡೆಯಿರಿ.

ಶಿವ : ಮೂರ್ಖ! ನಾನು ಪಾರ್ವತಿಯ ಪತಿ. ನನ್ನ ಮನೆಗೇ ಪ್ರವೇಶವನ್ನು ತಡೆಯುವ ನಿನ್ನ ಸೊಕ್ಕೆಷ್ಟು? (ಚಪ್ಪಾಳೆ ತಟ್ಟುತ್ತ) ಯಾರಲ್ಲಿ? (ನಾಲ್ಕಾರು ಗಣಗಳ ಪ್ರವೇಶ) ಈ ಹುಚ್ಚಯಾರು? ಅವನಿಗೆ ಇಲ್ಲೇನು ಕೆಲಸ? ಇವನನ್ನು ಇಲ್ಲಿಂದ ಓಡಿಸಿರಿ. (ಹೋಗುವನು)

ಮಗು : (ಗಣಗಳನ್ನುದ್ದೇಶಿಸಿ) ದೂರ ತೊಲಗಿ, ಇಲ್ಲವಾದರೆ ಒಬ್ಬೊಬ್ಬರನ್ನೂ ತುಂಡರಿಸಿ ಹಾಕುತ್ತೇನೆ.

ಒಬ್ಬ : ನಾವು ಶಿವನಗಣ ಎಂಬುದು ನಿನಗೆ ಗೊತ್ತೊ?

ಇನ್ನೊಬ್ಬ : ಜೀವದ ಮೇಲೆ ನಿನಗೆ ಆಶೆ ಇದ್ದರೆ ಇಲ್ಲಿಂದ ತೊಲಗು.

ಮಗು : (ಸ್ವಗತ) ಶಿವ ನನ್ನ ಅಮ್ಮನ ಪತಿ. ಈಗೇನು ಮಾಡಲಿ? ಇವರೊಡನೆ ಯುದ್ಧ ಮಾಡಲೋ ಬೇಡವೋ?

(ರಂಗದ ಹಿಂದೆ ಪಾರ್ವತಿಯ ಮನೆಯ ಭಾಗದಲ್ಲಿ ಬೆಳಕು ಬೀಳುತ್ತದೆ. ಮುಂದಿನ ದೃಶ್ಯಮರೆಯಾಗುವುದು.)

ಪಾರ್ವತಿ : ಸಖೀ, ಹೊರಗೆ ಯಾರೋ ಬಹಳ ಗದ್ದಲ ಮಾಡುತ್ತಿರುವಂತಿದೆ ಏನಿದು ಗದ್ದಲ? ಏತಕ್ಕೆಂದು ತಿಳಿದು ಬಾ.

ಸಖಿ : (ನೋಡಿ ಬಂದು) ಅಮ್ಮಾ, ಅವರು ನಿಮ್ಮ ಮಗನನ್ನೇ ಗದರಿಸುತ್ತಿದ್ದಾರೆ. ನೀವೀಗ ಮಣಿಯಬಾರದು, ಇದು ನಿಮ್ಮ ಮರ್ಯಾದೆಯ ಪ್ರಶ್ನೆ.

ಪಾರ್ವತಿ : (ಸ್ವಗತ) ಎಷ್ಟೆಂದರೂ ಶಿವ ನನ್ನ ಪೂಜ್ಯಪತಿ. ಆದರೂ ಆತ ಬಲ ಪ್ರಯೋಗದಿಂದೀಕೆ ಪ್ರವೇಶಿಸಬೇಕು? ಆದದ್ದಾಗಲಿ, ನೋಡಿಯೇ ಬಿಡುವ. (ಪ್ರಕಾಶ) ಸಖೀ, ಯಾರಿಗೂ ಮಣಿಯಬಾರದೆಂದು ನನ್ನ ಮಗನಿಗೆ ಹೇಳು. (ಕತ್ತಲೆ ಹೊರಭಾಗದಲ್ಲಿ ಬೆಳಕು)

ಸಖಿ : ಮಗೂ, ನೀನು ಯಾರನ್ನೂ ಒಳಬಿಡ ಬಾರದಂತೆ. ನಿನ್ನ ಅಮ್ಮ ಅಪ್ಪಣೆ ಮಾಡಿದ್ದಾರೆ.

ಮಗು : (ಗಣಗಳನ್ನುದ್ದೇಶಿಸಿ) ನಾನು ಪಾರ್ವತಿಯ ಕುವರ, ನೀವು ಶಿವನ ಸೇವಕರು. ನಿಮಗೆ ಶಿವನ ಅಪ್ಪಣೆ ಮುಖ್ಯವಾದರೆ, ನನಗೆ ತಾಯಿಯ ಮಾತೇ ಪ್ರಾಧಾನ, ಇನ್ನೊಮ್ಮೆ ಹೇಳುತ್ತೇನೆ, ತಾಯಿಯ ಅಪ್ಪಣೆ ಇಲ್ಲದೇ ಶಿವನಿಗೂ ಪ್ರವೇಶವಿಲ್ಲ.

(ಮತ್ತೆ ಶಿವನ ಪ್ರವೇಶ)

ಒಬ್ಬಗಣ : ಮಹದೇವಾ! ಆ ಬಾಲಕ ಪಾರ್ವತಿ ದೇವಿಯವರ ಸ್ವಂತ ಮಗನಂತೆ!

ಶಿವ : ಎಲೌ ಪಾರ್ವತಿ! ಇದೇನು ವಿಪರೀತಕ್ಕೆ ಹೋದೆ? ನನಗೀಗ ಬೇರೆ ದಾರಿಯೇ ಇಲ್ಲ.

(ತುಸು ಹೊಡೆದಾಟ, ಕತ್ತಲೆ ಬೆಳಕು. ಗಣಪತಿ ನೆಲಕ್ಕುರುಳಿದ್ದಾನೆ. ರುಂಡ ಬೇರ್ಪಟ್ಟಿದೆ. ಪಾರ್ವತಿಯ ಆಗಮನ)

ಪಾರ್ವತಿ : (ದುಃಖಿಸುತ್ತ) ಇದೇನು ಮಾಡಿಬಿಟ್ಟಿರಿ ದೇವಾ! ಈ ಮಗು ನನ್ನ ಸ್ವಂತ ಸೃಷ್ಟಿ. ನೀವಿವನನ್ನು ಹೀಗೆ ಕೊಲ್ಲಬಹುದೇ? ನಾನಿದನ್ನು ಸಹಿಸಲಾರೆ. ನಾನು ಇನ್ನು ಒಂದು ಕ್ಷಣವೂ ಇಲ್ಲಿ ನಿಲ್ಲಲಾರೆ. ನೀವು ನಿಮ್ಮ ತಪ್ಪಿಗೆ ಶಿಕ್ಷೆ ಅನುಭವಿಸುತ್ತೀರಿ! ನನ್ನ ಕೋಪಾಗ್ನಿಯಲ್ಲಿ ಇಡೀ ಕೈಲಾಸವೇ ದಹಿಸಿ ಹೋಗಲಿ!!

ಶಿವ : ಶಾಂತಳಾಗು ದೇವಿ. ನಿನ್ನ ಮಗನನ್ನು ನಾವು ಮತ್ತೆ ಬದುಕಿಸುತ್ತೇವೆ. ನಮಗೆ ಸುಖ–ಶಾಂತಿ ಬೇಕು. ನಿನ್ನನ್ನು ಅಗಲಿ ನಾವು ಇರಲಾರೆವು. ನಿನ್ನ ವಿಚಾರಗಳಿಗೆ ಇನ್ನು ಮಾನ್ಯತೆ ಕೊಡುತ್ತೇವೆ.

ಪಾರ್ವತಿ : ಹಾಗಿದ್ದರೆ ನನ್ನ ಮಗು ಕೇವಲ ಜೀವಂತವಾದರೆ ಸಾಲದು. ಅವನು ಎಲ್ಲಾ ಗಣಗಳಲ್ಲಿ ಮಾನ್ಯನೆನಿಸಬೇಕು.

ಶಿವ : ಹಾಗೆಯೇ ಆಗಲೀ ದೇವಿ. ಗಣಗಳೇ, ನೀವು ಉತ್ತರಾಭಿಮುಖವಾಗಿ ಹೋಗಿರಿ, ದಾರಿಗೆ ಅಡ್ಡ ಬಂದ ಮೊದಲ ಪ್ರಾಣಿಯ ಶಿರವನ್ನು ತಂದು ಈ ಬಾಲಕನ ಮುಖಕ್ಕೆ ಜೋಡಿಸಿದರೆ ಇವನು ಮತ್ತೆ ಜೀವಂತನಾಗುತ್ತಾನೆ. (ಕತ್ತಲೆ–ಪ್ರಕಾಶ)

ಶಿವ : ಮಗೂ ಏಳು ಇಂದಿನಿಂದ ನೀನೆ ನಮ್ಮ ಗಣಗಳಿಗೆಲ್ಲಾ ನಾಯಕ. ಗಣೇಶನೆಂದೇ ನಿನ್ನನ್ನು ಎಲ್ಲರೂ ಕರೆಯುವರು.

ಪಾರ್ವತಿ : ಮಗೂ ಗಣೇಶ, ಸಕಲ ಮಂಗಲಕಾರ್ಯಗಳಲ್ಲಿಯೂ ನಿನಗೇ ಅಗ್ರಪೂಜೆ ಸಲ್ಲಲಿ. ನೀನು ವಿಘ್ನೇಶ್ವರನೂ, ವಿದ್ಯಾದೇವತೆಯೂ ಆಗಿ ಭೂಲೋಕದಲ್ಲಿ ಪ್ರಸಿದ್ಧಿ ಪಡೆ.

ಶಿವ : ಮಗೂ ಸಿದ್ಧಿ ವಿನಾಯಕಾ, ಎಲ್ಲರೂ ನಿನ್ನನ್ನು ಭಕ್ತಿಯಿಂದ ಪೂಜಿಸಿ ಇಷ್ಟಾರ್ಥ ಪಡೆಯಲಿ.

ಗಣಗಳು : "ಗಣಪತಿಗೆ ಜಯವಾಗಲಿ, ಸಿದ್ಧಿ ವಿನಾಯಕನಿಗೆ ಜಯವಾಗಲಿ, ವಿಘ್ನೇಶ್ವರನಿಗೆ ಜಯವಾಗಲಿ". ✦

---

**ಶ್ರೀಮತಿ ಕೆ. ವಾಣಿ**

---

# ಪ್ರಭುದೇವ

'ಮಾತೆಂಬುದು ಜ್ಯೋತಿರ್ಲಿಂಗ' ಎಂದು ಮಾತನ್ನು ಜ್ಯೋತಿರ್ಲಿಂಗದ ಮಟ್ಟಕ್ಕೇರಿಸಿದ ಅಲ್ಲಮ ಪ್ರಭು ಬೆಡಗಿನ ವಚನಗಳ ನೇಕಾರ. ಅಲ್ಲಮನು ವೀರಶೈವ ವಚನಾಮೃತವನ್ನು ಕನ್ನಡ ಜಿಜ್ಞಾಸುಗಳಿಗೆ ಹಂಚಿದ್ದಾನೆ. ಈತನು ವಚನ ವಾಙ್ಮಯದ ಅಮರ ಜ್ಯೋತಿಯಂತಿರುವನು. ಎಲ್ಲ ಗುಣಗಳಿಂದಲೂ ಪ್ರಭುದೇವನ ವಚನಗಳ ಶ್ರೇಷ್ಠತೆ ಅದ್ವಿತೀಯವಾಗಿದೆ. ಅನುಭವವಿಲ್ಲದ ಆಚರಣೆಗೆ ಬಾರದ ಮಾತನ್ನು ಮನಕ್ಕೆ ನಾಟುವ ವಿಡಂಬನೆಯ ಮೂಲಕ ಟೀಕಿಸುತ್ತಾನೆ. ಅಲ್ಲಮನು ಅನುಭವ ಮಂಟಪದ ಅಧ್ಯಕ್ಷನಾಗಿ ಶೂನ್ಯ ಸಿಂಹಾಸನದ ದೊರೆಯಾಗಿದ್ದರೂ ಯಾವ ಕಟ್ಟಿಗೂ ಅವನು ಒಳಪಡಲಿಲ್ಲ. ಎಲ್ಲ ಮಾರ್ಗಗಳ ವ್ಯಕ್ತಿಗಳ ಗುಣಾಂಶವನ್ನು ಅವನು ಮೆಚ್ಚಿದನು, ಅವಗುಣಗಳನ್ನು ತಿರಸ್ಕರಿಸಿ ಎತ್ತಿನುಡಿದನು. ವೀರಶೈವ ಸಹಿತವಾಗಿ ಎಲ್ಲ ಸಂಪ್ರದಾಯಗಳು ಅವನ ನಿಷ್ಠುರ ವಿಮರ್ಶೆಗೆ ಗುರಿಯಾದವು. ಆ ನಿಷ್ಠುರತೆ ಜ್ಞಾನಿಯ, ಸತ್ಯ ಪ್ರೇಮಿಯ ಶುದ್ಧ ಬುದ್ಧಿಯಿಂದ, ಸೂಕ್ಷ್ಮ ದೃಷ್ಟಿಯಿಂದ ಉಂಟಾದುದು. ಅಂತೆಯೇ ಅದಕ್ಕೆ ಎಲ್ಲರೂ ತಲೆ ಬಾಗುತ್ತಿದ್ದರು. ಪ್ರಭುದೇವನ ವ್ಯಕ್ತಿತ್ವ ಮತ್ತು ವಚನ ರಚನೆ ಕನ್ನಡ ವಾಙ್ಮಯಕ್ಕಲ್ಲದೆ ಭಾರತೀಯ ಹಾಗೂ ಜಾಗತಿಕ ಸಾಹಿತ್ಯಕ್ಕೆ ಅಸಾಧಾರಣವಾದ ತೇಜಸ್ಸುಳ್ಳ ಕಾಣಿಕೆಯಾಗಿರುತ್ತವೆ.

ವೀರ ಶೈವ ಹಾಗೂ ಶಿವಭಕ್ತ ಹರಿಹರ ಕವಿಯ 'ಪ್ರಭುದೇವರಗಳೆ' ಯಲ್ಲಿ ಅಲ್ಲಮನ ಜೀವನ ಚರಿತ್ರೆ ಹೀಗಿದೆ. ಒಮ್ಮೆ ಕೈಲಾಸದ ಶಿವನ ಓಲಗದಲ್ಲಿ ನಿರ್ಮಾಯನೆಂಬ ಗಣನು ಸುರಸತಿಯೆಂಬುವಳನ್ನು ನೋಡಿದನು. ಆಗ ಹರನು ಅವರಿಗೆ ನೀವಿಬ್ಬರೂ 'ಭೂಮಿಯಲ್ಲಿ ಹುಟ್ಟಿ ಸಕಲ ಸುಖವನ್ನು ಅನುಭವಿಸಿ ಹರುಷದಿಂದ ಇಬ್ಬರೂ ಬನ್ನಿ' ಎಂದು ಹೇಳಿದನು. ನಿರ್ಮಾಯನು ಬಳ್ಳಿಗಾವೆಯೆಂಬ ಊರಿನ ನಾಗವಾಸಾಧಿಪತಿಯ ಸತಿಯಲ್ಲಿ ಅಲ್ಲಮನಾಗಿ ಜನಿಸಿದನು. 'ಶಿವ ಪದಕ್ಕೆ ಪೊಸಕೆಂದೆನಿಸಿ, ಭಕ್ತಿವಾರಿಧಿಗೆ ವಿಧುವೆನಿಸಿ' ಬೆಳೆದನು. ಹೀಗೆ ಬೆಳೆಯಲು ಆತನೊಡನೆ ಸಂತತಂ ಸೊಗಯಿಪ ಮೃದಂಗದ ಮಹಾವಿದ್ಯೆಯೂ ಬೆಳೆಯಿತು. ಆ ವಿದ್ಯೆಯೊಡನೆ 'ಜವ್ವನವೂ ಎಸೆದು' ಬೆಳೆಯಿತು. ಹರುಷದಿಂದ ಗೊಗ್ಗೇಶ್ವರಾಲಯಕ್ಕೆ ಒಂದು ಗಿರಿಜೇಶನಿಗೆ ಮೃದಂಗದ ನಾದವನ್ನು ಕೇಳಿಸುತ್ತಿದ್ದನು.

ಈ ಕಡೆ ಆ ಸುರಕಾಂತೆ ಅದೇ 'ಪುರದ ಧನದತ್ತನ ಅಬಲೆಯ ಉದರದಿ ಹುಟ್ಟಿ ರೂಪಿನೊಳು ರತಿ ಸರಸ್ವತಿಗೆ ಉಪ್ಪರಂಗಟ್ಟಿ ಕಾಮಲತೆಯೆಂಬ ಹೆಸರಿನಿಂದ ಶಶಿಕಿರಣದಂತೆ ಬೆಳೆದಳು'. ಕಾಮಲತೆ ಭೂತೇಶನಿಗೆ ಸೇವೆಯಂ ಕೈಕೊಂಡು ಶಿವಾಲಯಕ್ಕೆ ಬಂದು ಶಿವಲಿಂಗದ ದರ್ಶನ ಮಾಡಿ ಕೈ ಮುಗಿದು ಪ್ರದಕ್ಷಿಣೆ ಮಾಡುತ್ತಾ ತಿರುಗಿ ಬರುತ್ತಿರಲು ಕಸ್ತೂರಿ ತಿಲಕದ ಕುಮಾರನಾದ ಅಲ್ಲಮನನ್ನು ಕಂಡು ನಿಂದಂತೆ ನಿಂತಳು. ಇವಳನ್ನು ನೋಡಿದ ಅಲ್ಲಮನು ತನ್ನನ್ನು ಹಾಗೂ ಶಿವನನ್ನು ಮರೆತನು. ನಂತರ ಇವರಿಬ್ಬರು ಒಟ್ಟಾಗಿ ಕೆಲವು ಕಾಲ ಸುಖದಿಂದ ಇರಲು ಶಿವಾಜ್ಞೆ ಹತ್ತಿರ ಬರಲು ಕಾಮಲತೆಗೆ ಮಹಾಜ್ವರಂ ಬಂದು ಈ ವಸುಧೆಯೊಳಗಣ ಸುಖಂ ತನಗೆ ಸಾಕೆಂದು ದೇವಲೋಕಕ್ಕೆ ನಡೆದಳು. ಕಾಮಲತೆಯ ಶೋಕಾಗ್ನಿಯಿಂದ ಉರಿದು ಬೆಂದು ಪುರದ ಹೊರಗಣ ಕಣಗಿಲೆಯ ತೋಟಕ್ಕೆ ಅಲ್ಲಮನು ಬಂದು ಕುಳಿತು ಚಿಂತೆಯಿಂದ ಅಳುತ ನೆಲದ ಮೇಲೆ ಬರೆಯಲು ಅಲ್ಲಿ ಹೊನ್ನ ಕಳಶಂ ಕಂಡು ಬಂದಿತು. ಊರ ನೃಪತಿ ಬಂದು ತನ್ನ ಆಳು ಕಾಳುಗಳಿಂದ ಪೂರ್ತಿ ಬಿಡಿಸಲು ಒಂದು ಶಿವಾಲಯವಿತ್ತು. ಆದರೆ ಯಾರೂ ಶಿವಾಲಯದ ಬಾಗಿಲು ತೆಗೆಯಲು ಮುಂದೆ ಬರದಿದ್ದಾಗ, ಮನದೊಳು ಅಲ್ಲಮಂ ಅತಿ ವಿರಕ್ತಿಯಂ ಕೈ ಕೊಂಡು ಸತಿಕಾಮಲತೆಯಿಲ್ಲ ಇನ್ನೇಕೆ ದೇಹದಭಿಲಾಷೆ ಛೀ ತೆಗೆಯೆಂದು ಭಸಿತವಂ ಮನವಾರೆ ಉದ್ಧೂಳಿಸಿ ಕೊಂಡು ಶಶಿಧರನೆ ಶರಣು ಎನುತ ಕಡು ನಿಷ್ಠೆ ಕೈಕೊಂಡು ಒಂದು ಕದಹಂ ತೆರೆದು ಧ್ಯೋಂಕನೊಳಗಂಪೊಕ್ಕು ನರ ಲೋಕವಂ ಮರೆದು ಪುಗುತಂ ಮಹಾಲಿಂಗದಂಘ್ರಿಗೆ ಎರಗುತ್ತಂದು ಕೆಲನನ್ನು ಈಕ್ಷಿಸಲು' ಅನಿಮಿಷಯ್ಯನು ಕುಳಿತಿದ್ದನು. ಆ ಅಪ್ರತಿಮ ಶಿವಯೋಗಿ ಕಣ್ಣಲ್ಲಿ ಜೀವವಂ ಪಿಡಿದಿದ್ದು ಕೈಯಲ್ಲಿ ಶಿವಲಿಂಗವನ್ನು ಹಿಡಿದಿದ್ದ. ಅಲ್ಲಮನನ್ನು ನೋಡಿ ಇವನು ಕಾರಣಿಕನೆಂದು ನಿಶ್ಚೈಸಿ ತನಗೆ ತನುವಿನ ತೊಡಕು ಸಾಕೆಂದು ನಿಶ್ಚೈಸಿ ಶಿವಲಿಂಗವನ್ನು ಅಲ್ಲಮನ ಅಂಗೆಯ್ಯಲ್ಲಿ ಇಟ್ಟು ಶಿವೈಕ್ಯನಾದನು.

ಶಿವಲಿಂಗವನ್ನಿಡಿದು ಅಲ್ಲಮನು ಹೊರಟನು. ನಡೆದುದೆ ಬಟ್ಟೆಯಾದುದು. ಶಿವನ ಮದಕರಿಗೆ, ನುಡಿದುದೇ ವೇದವಾದುದು. ಲಿಂಗವಂತಂಗೆ, ಮುಟ್ಟಿದ ಮರಂ ಮನುಜರಾಗಿ ನಡೆದವು ಕೆಲವು. ಕಂತುಹರನ ಅವತಾರವೆಂಬಂತೆ ಅಲ್ಲಮನು ಬರುತ್ತಾ ಲಿಂಗಕ್ಕೆ ನೋಟದಲ್ಲೆ ಮಜ್ಜನ ಕರೆದು, ಅರಳ್ದಕ್ಷಿಯೆಂಬ ಹೂವಿಂದೆ ಪೂಜಿಸಿ, ಮರೆದು ನರುಸುಯ್ಯ ಕಂಪಿಂದೆ ನವ ದೂಪವಂ ಕೊಟ್ಟು, ನೆರೆ ಮನದ ಬೆಳಗಿನಾರತಿಯೆತ್ತಿದನು. ಬರುವ ದಾರಿಯಲ್ಲಿ ಬಸವಣ್ಣನನ್ನು ಕಂಡು ಮಾತನಾಡಿ, ಚೆನ್ನ ಸೊನ್ನಲಿಗೆಯ ಪುರಕ್ಕೆ ಬಂದು ಮೃಡಮೂರ್ತಿ ಸಿದ್ಧರಾಮನನ್ನು ಒಲಿದು ಕಲಿಯುಗ ಪೊಲ್ಲೆಂದು ಬುದ್ಧಿಯಂ ಹೇಳುತ ಶ್ರೀಪರ್ವತಂ ಮುಟ್ಟಿ ಬಂದನು. ಅಲ್ಲಮದೇವ ಕದಳೀ ಬನದ ಬಟ್ಟೆಗೊಂಡನು ಅಲ್ಲಮದೇವ, ಆದಿರದ ಅನಿಮಿಷ ಸಿದ್ಧಲಿಂಗನು ಅಲ್ಲಮದೇವ!

ಇಂತು ಬರುತಿರೆ ಕಾಣಲಾಯ್ತು ಕೈಲಾಸವದು ಶಾಂತಾರ್ಕ ಕೋಟಿ ಕಿರಣಂಗಳು ಬೆಳಗುತ. ಅದು ಶಶಿಯುತಾಯ್ವನೆಯಂತೆ ಇರ್ದುದಾ ರಜತಗಿರಿ ಪೆಸರ ದೇವರ ಪುಣ್ಯದಂತೆ ಇರ್ದುದು ಆಭವಗಿರಿ.........ಹರನ ಚರಣಕ್ಕೆ ಎರಗಿ ಕುಳ್ಳಿರ್ದನು ಅಲ್ಲಮಂ, ಪರಮೇಶ್ವರ ಕೌತುಕಂಬಡುತ್ತ ಎಲ್ಲಮಂ ಕೇಳ್ದು ನೆರೆ ಹೋದ ಬಂದಾದ ವೃತ್ತಾಂತವಂ ತಾಳ್ದು ಮನದೊಳಗೆ ಅಕ್ಕರಿಂದ ಸಂತೋಷವಂ ಮುನ್ನಿನ ಅಂದದೊಳು ನಿರ್ಮಾಯವೆಸರಂ ಸಲಿಸೆ ಮನ್ನಿಸುತ್ತ ಅಲ್ಲಿ ಗಣ ಪದವಿಯೊಳು ಸೈವೆರೆಸೆ ಶಿವನ ಸಾರೂಪ್ಯದಿಂದ ಒಪ್ಪಿರ್ದನು ಅಲ್ಲಮಂ. ಹೀಗೆ ಹರಿಹರನ 'ಪ್ರಭುದೇವರ ರಗಳೆ' ಮುಗಿಯುತ್ತದೆ.

ಒಟ್ಟಿನಲ್ಲಿ ಆತ್ಮ ಚಿಂತನೆಯಿಂದ ದಿವ್ಯ ಜ್ಞಾನಿಯಾದ, ಅನಿರ್ವಚನೀಯವಾದ ಸಾಧನೆಯಿಂದ ಬುದ್ಧನೂ ಸಿದ್ಧನೂ ಆದ ಅಲ್ಲಮನು ಲೋಕೋದ್ಧಾರಕ್ಕಾಗಿ ಹಲವು ಕಾಲ ದೇಶ ಪರ್ಯಟನೆ ಮಾಡಿ ಪ್ರಮಥರನ್ನು ಮುಮುಕ್ಷುಗಳನ್ನು ಮುಗ್ಧರನ್ನೂ ಕಂಡು ಎಚ್ಚರಿಸಿ, ನೊಂದ ಜೀವಿಗಳಿಗೆ ಶಿವಜ್ಞಾನದ ಅಮೃತವನ್ನುಣಿಸುತ್ತ, ಸಾಧನೆಯಲ್ಲಿ ತೊಡಗಿಸಿ, ಕರುಣಿಸಿ, ಶಿವಶರಣರ ಕಾಮ

ಶ್ರೀಮತಿ ಎ. ಸ್. ಪಂಕಜ

ಧೇನುವಿನಂತಿದ್ದ ಬಸವಣ್ಣನ ಬಳಿಗೆ ಬಂದನು. ಲೌಕಿಕ ಪಾರಲೌಕಿಕಗಳೆರಡರಲ್ಲೂ ಪರಿಣತ ಜ್ಞಾನಿಯಾಗಿದ್ದ ಆತನು ಕಲ್ಯಾಣದಲ್ಲಿದ್ದ ಶಿವ ಶರಣರನ್ನೆಲ್ಲ ಸಂಘಟಿಸಿ ಅವರ ಆತ್ಮೋನ್ನತಿಯನ್ನು ಸಾಧಿಸುವ ಮಹತ್ಕಾರ್ಯದಲ್ಲಿ ತತ್ಪರನಾದನು. ಪ್ರಭುದೇವ ನಿಂತ ಎಡೆ ಕೈಲಾಸವಾಯಿತು. ಅನುಭಾವಿಗಳು ಪ್ರಭುದೇವನ ಉಪದೇಶದಿಂದ ಮುಮುಕ್ಷುಗಳಾದರು. ಬಸವಣ್ಣ ಪ್ರಭುದೇವನಿಗಾಗಿ ಶೂನ್ಯ ಸಿಂಹಾಸನವನ್ನು ರಚಿಸಿದನು. "ಶೂನ್ಯಸಿಂಹಾಸನಾಸೀನನಾದ ಪ್ರಭುದೇವನ ನುಡಿಗಳು ದೇವವಾಣಿಯಂತೆ ಪ್ರಾಮಾಣಿಕವಾದವು. ಸತ್ಯನಿಷ್ಠವಾದವು. ನ್ಯಾಯನಿಷ್ಠುರತೆ ಆತನದು. ಆತನ ಎತ್ತರವೂ ಅಷ್ಟೆ. ಜಾತಿ ಮತ ಪಂಥಗಳಿಗೆ ಅತೀತನಾದ ಆ ಜ್ಞಾನಿಗೆ ತನ್ನದೆಂಬ ಅಭಿಮಾನವಾಗಲಿ, ಪರರದೆಂಬ ಪಕ್ಷಪಾತವಾಗಲಿ ಇಲ್ಲ. ಇತರ ಸಂಪ್ರದಾಯಗಳಂತೆ ವೀರಶೈವ ಸಂಪ್ರದಾಯವನ್ನು ಕಟುವಾದ ಟೀಕೆಗೆ ಒಳಗು ಮಾಡುತ್ತಾನೆ. "ಆತನ ದೃಷ್ಟಿ ತೀಕ್ಷ್ಣ, ಬುದ್ಧಿ ಚುರುಕು, ನಾಲಿಗೆ ಹರಿತ" "ಆತನ ವಚನಗಳೆಲ್ಲ ಸಿದ್ಧಪುರುಷನ ಅಧಿಕಾರ ವಾಣಿಯೇ ಹೊರತು, ಸಾಧಕನ ಆಂತರಿಕ ಹೋರಾಟವಾಗಲಿ, ಆರ್ತನಾದವಾಗಲಿ, ಆತ್ಮನಿಂದೆಯಾಗಲಿ ಅಷ್ಟಾಗಿ ಕಂಡು ಬರುವುದಿಲ್ಲ". ಪ್ರಭುವು ಶರಣರನ್ನು ತಿದ್ದಿ ಸದಸದ್ವಿವೇಕವನ್ನೂ ಶಿವಭಕ್ತಿಯನ್ನೂ ಮೋಕ್ಷ ಮಾರ್ಗವನ್ನು ಬೋಧಿಸುತ್ತ, ಯಾರೇ ಶರಣರು ಐಕ್ಯ ಸ್ಥಿತಿಯನ್ನು ಪಡೆಯುವ ಘಟ್ಟಬಂದಾಗ ಅವರಿಗೆ ವಿಹಿತವಾದ ನಿರವಸ್ಥಿತಿಯನ್ನು ನಿರೂಪಿಸಿ, ಕೊನೆಗೆ ತಾನೂ ಶ್ರೀಪರ್ವತಾಭಿಮುಖವಾಗಿ ಗುಹೇಶ್ವರನೆಂಬ ಲಿಂಗದ ನಿಜ ಸಮಾಧಿಯಲ್ಲಿ ನಿಂದು ಬಯಲಲ್ಲಿ ಬಯಲಾದನು, ನಿರಾಳಕ್ಕೆ ನಿರಾಳವಾದನು. "ಆ ಮಾನವದೇವನು ನಡೆದು ತೋರಿದ ಪದ್ಧತಿಯು ಕೈವಲ್ಯಮಾರ್ಗವಾಗಿ ಇಂದಿಗೂ ಅಚ್ಚಳಿಯದೆ ಕಾಣಬರುತ್ತದೆ. ನುಡಿದು ಬೋಧಿಸಿದ ವಾಣಿ ಅಭಯ ವಚನ ಮುದ್ರಿಕೆಯಾಗಿ ಸ್ಪಷ್ಟವಾಗಿ ಕೇಳ ಬರುತ್ತದೆ. ಅಲ್ಲಮ ಪ್ರಭುವಿನ ವಚನಗಳನ್ನು ಸರಳ ವಚನಗಳು, ಗೀತೆಗಳು ಅಥವಾ ಹಾಡುಗಳು, ಬೆಡಗಿನ ವಚನಗಳು ಎಂದು ಮೂರು ವಿಧವಾಗಿ ವಿದ್ವಾಂಸರು ವಿಂಗಡಿಸುತ್ತಾರೆ. ಬೆಡಗು ಎಂದರೆ ಚೆಲುವು, ಚಮತ್ಕಾರ, ಸರಳವಲ್ಲದ್ದು ಎಂದರ್ಥ. ಯಾವುದನ್ನು ಹಲವಾರು ಮಾತುಗಳಲ್ಲಿ ಬಿಚ್ಚಿ ಹೇಳಬಹುದಿತ್ತೋ ಅದನ್ನು ಕಡಿಮೆ ಮಾತುಗಳಲ್ಲಿ ಮುಚ್ಚಿ ಹೇಳುವುದು ಬೆಡಗಿನ ವಚನಗಳ ವೈಶಿಷ್ಟ್ಯ. ಉದಾಹರಣೆಗೆ–

ಅರಗಿನ ಪುತ್ಥಳಿಯನುರಿ ಕೊಂಡಡೆ
ಉದಕ ಬಾಯಾರಿ ಬಳಲುತ್ತಿದೆ!
ಅಗೆಯಿಂಭೋ! ಬಾವಿಯ ನಗೆಯಿಂಭೋ!
ಅಗೆದಾತ ಸತ್ತ–ಬಾವಿ ಬತ್ತಿತ್ತು
ಇದು ಕಾರಣ ನೆರೆ ಮೂರು ಲೋಕ
ಬರು ಸೂರೆ ವೋಯಿತ್ತು–ಗುಹೇಶ್ವರ

ಈ ದೇಹವನ್ನು ತಾಪತ್ರಯಾಗ್ನಿ ದಹಿಸಲು ಮನದ ಕಾಮದ ತೃಷೆ ವಿಪುಲವಾಗಿ ಬಳಲುತ್ತಿದೆ. ಈ ತೃಷೆಯನ್ನು ಹಿಂಗಿಸಲು ಜೀವನು ತನುವೆಂಬ ಭೂಮಿಯನ್ನು ತೋಡಿಕೊಂಡು ಅದರಲ್ಲಿಯ ಸಂಸಾರ ರಸವನ್ನು ಕುಡಿದೋ, ಕುಡಿಯದೆಯೋ ವ್ಯರ್ಥ ಸತ್ತು ಹೋಗುವನು. ವಿಷಯ ರಸದ ಬಾವಿಯೂ ಬತ್ತಿ ಹೋಗುವುದು, ಸಂಸಾರದ ಈ ಭ್ರಾಂತಿ ದೋಷದಿಂದ ಮೂರು ಲೋಕವೆಲ್ಲ ಹೀಗೆ ಒಂದೇ ಸಮನೆ ಸೂರೆ ಹೋಯಿತು.

ಭುಕ್ತಿ ಲಂಪಟರ ಭೋಗಕ್ಕಾಗಿ ವೇದ–ಶಾಸ್ತ್ರ ಪುರಾಣ–ತರ್ಕ, ಕೊನೆಗೆ ಭಕ್ತಿಯೆಂಬುದೂ ಕುಯುಕ್ತಿಯಿಂದ ಅಪಯುಕ್ತವಾದವೆಂಬುದೇ ಅಲ್ಲಮನ ವಿಚಾರ–ಇದಕ್ಕೆ ಆತನ ಈ ವಚನವೇ ಸಾಕ್ಷಿಯಾಗಿದೆ.

ವೇದ ವೆಂಬುದು ಓದಿನ ಮಾತು
ಶಾಸ್ತ್ರವೆಂಬುದು ಸಂತೆಯ ಸುದ್ದಿ
ಪುರಾಣವೆಂಬುದು ಪುಂಡರ ಗೋಷ್ಠಿ
ತರ್ಕ ವೆಂಬುದು ತಗರ ಹೋರಟೆ
ಭಕ್ತಿಯೆಂಬುದು ತೋರುಂಬಲಾಭ
ಗುಹೇಶ್ವರ ನೆಂಬುದು ಮೀರಿದ ಘನವು

ಇಂತಹ ಕ್ಷುದ್ರಜನದ ಕುಬ್ಜ ಬಾಹುಗಳಿಗೆ ಅಮೃತ ಫಲ ಮೀರಿದ ಘನವಲ್ಲದೆ ಮತ್ತೇನು.

ಆತ್ಮ ಬಲದ ಮುಂದೆ ಇತರ ಬಲವಾವುದೇ ಆಗಲಿ, ಅದು ಎಷ್ಟೇ ಪೃಥುಲವಾಗಿರಲಿ ನಿರೋಧಿಸಿ ನಿಲ್ಲದೆಂಬುದೇ ಅವನ ದಾರ್ಢ್ಯ, ಧೀರತನ. ಅದೇ ಆತನ ತನ್ನತನ. ಈ ಅಮಾರ್ಯ ಶಕ್ತಿಸ್ಫೋಟದಿಂದ ಸಂಚಾಲನೆ ಗೊಂಡ ವ್ಯಕ್ತಿಗತ ಆತ್ಮವು ವಿಶ್ವದ ಸ್ಥೂಲ ದೃಷ್ಟಿಯಿಂದ ಎಷ್ಟೇ ಕಿರಿದಾದರೂ ಅಷ್ಟ ಸೂಕ್ಷ್ಮವೆನಿಸಿ ಮಣ್ಣಿನತುಯ್ತವನ್ನು ತಪ್ಪಿಸಿಕೊಂಡು, ಮಹತ್ತಿನ ಅಂತರಾಳದಲ್ಲಿ ಸಮಸ್ಪಂದನ ಸ್ಫುರಣೆಯನ್ನು ತೊಡಗಿಸುವುದೇ ವ್ಯಕ್ತಿಸಾಧನೆಯ ಸಂವಿಧಾನವೆಂಬುದನು ಅಲ್ಲಮನು ಬಲ್ಲವನಾಗಿದ್ದನು. ಅದನ್ನು ಸಿದ್ಧಿಸಿ ಕೊಂಡ ಬಲ್ಲಿದನೂ ಹೌದು. ಅವನು

ದೇವ ಲೋಕದವರ ತೃಣವೆಂಬೆ
ಮರ್ತ್ಯ ಲೋಕದವರ ತೃಣವೆಂಬೆ
ಅಹಂಕಾರವೆಂಬ ಶೃಂಗಾರದ ಮಾಣೆ
ನಾನಲ್ಲದನ್ಯವನಲ್ಲೆಂಬೆ
ಗುಹೇಶ್ವರಂ ಅಗೆ ತಾನೆಯಾಗಿ!

ಈ ಅಹಂಕಾರವು ಆತ್ಮೇತರವಾದುದನ್ನು ಪ್ರತ್ಯೇಕಿಸುವುದಾಗದೆ ಸಮಸ್ತವನ್ನೂ ತನ್ನೊಡನೆ ಏಕೀಭವಿಸುವುದಾದುದರಿಂದ – ಅದು ಜೀವಜಾಲಕ್ಕೆ ಉಪದ್ರವ ಕಾರಿಯಾಗದೆ ಪರಸ್ಪರ ಗೌರವ ಭಾವ ದ್ರವಿಸುವಂತೆ ಮಾಡುವುದು;

ಅಹಂಕಾರವನೆ ಮರೆದು
ದೇಹ ಗುಣಂಗಳನೇ ಜರೆದು
ಇಹ ಪರವೂ ತಾನೆಂದರಿದ ಕಾರಣ
ಸೋಹಂ ಭಾವ ಸ್ವಸ್ಥಿರವಾಯಿತ್ತು

ಇದನ್ನೇ ನಮ್ಮ ದ್ರಷ್ಟಾರರಾದ ಋಷಿಗಳು ಅನಾದಿ ಕಾಲದಿಂದಲೂ 'ಸೋಹಂ' ಎಂದು ಕಂಡು ಕೂಗಿ ಹೇಳುತ್ತ ಬಂದಿರುವರು.

ಅಲ್ಲಮನ ಆತ್ಮದ ಕುಲುಮೆಯಲ್ಲಿ ಉತ್ಪಾದಿಸಿದ್ದು, ಹಳ್ಳಿಯಲ್ಲಿ, ಹಾದಿಯಲ್ಲಿ, ಕಾಡಿನಲ್ಲಿ, ಪಟ್ಟಣದಲ್ಲಿ ಪರಿಷತ್ತಿನಲ್ಲಿ ಪ್ರತಿಪಾದಿಸಿದ್ದು, ಮೂಲ ಭೂತ ತತ್ತ್ವವನ್ನೇ. ಅವನು ಯಾವ ಮತವನ್ನಾಗಲಿ ಖಂಡಿಸಲೂ ಇಲ್ಲ, ಮಂಡಿಸಲೂ ಇಲ್ಲ. ವಿಶ್ವಧರ್ಮದ ಅಭಿಮತವೇ ಅವನ ಮತ.

ರಂ. ಶ್ರೀ ಮುಗಳಿಯವರು ಅಭಿಪ್ರಾಯ ಪಡುತ್ತಾರೆ–"ಅವನ ವಚನಗಳ ಬಹುಭಾಗವು ಆಧ್ಯಾತ್ಮ ಮಾರ್ಗಿಗಳಿಗೂ ಸುಲಭಗ್ರಾಹ್ಯವಲ್ಲ. ಅನುಭಾವದ ಆಳದಿಂದ, ಜ್ಞಾನದ ಶಿಖರದಿಂದ ಉಸುರಿದ ಆ ಮಾತು ಆಡಿದ ಮಾತಲ್ಲ. 'ಮಾತೆಂಬುದು ಜ್ಯೋತಿರ್ಲಿಂಗ' ಎಂಬುದನ್ನು ಅದರ ಸಾರವು ಸಾರ್ಥಕಪಡಿಸುತ್ತದೆ. ಆತ್ಮ ಜ್ಞಾನ–ಆನಂದಗಳು ಮಾತಿಗೆ ನಿಲುಕದ ಅನುಭವ ವಿಷಯಗಳು ಎಂಬುದನ್ನು ಅರಿತೂ ಪ್ರಭುದೇವನು ಬೆರಗಿನ ನುಡಿ ಬೆಡಗಿನ ವಚನಗಳಲ್ಲಿ ಅನುಭವದ ನಿರಾಕಾರವನ್ನು ನಿಲುಕುವಷ್ಟು ಮಾತಿನಲ್ಲಿ ಸಾಕಾರಗೊಳಿಸಿದ್ದಾನೆ ಅವನಿಗೇ ಸಾಧ್ಯವಾದ ಘನತೆಯದು."

ಅಲ್ಲಮನ ವಚನಗಳಲ್ಲಿ ಕರ್ಮಿಗಳಿಗೆ ಮತ ನಿಷ್ಠರಿಗೆ ಆಘಾತವುಂಟು ಮಾಡುವ ಆದೆಷ್ಟೋ ಮಾತುಗಳಿವೆ. ಆದರೆ ಅವೆಲ್ಲ ಅಂತಿಮ ಸತ್ಯದ ಸವಿಯನ್ನು ಉಣ್ಣಿಸುವ ಕಹಿಗುಳಿಗೆಗಳು. ಆತ್ಮೋದ್ಧಾರಕ್ಕೆ ಪ್ರೇರಕವಾದ ವಚನಗಳಿವೆ. ಜೊತೆಗೆ ನಿಜವಾದ ಭಕ್ತಿ-ಜ್ಞಾನ ಮುಕ್ತಿಗಳನ್ನು ಕುರಿತು ಸಹಜ ಉಕ್ತಿಗಳಿವೆ. ಚುಚ್ಚಿಯೂ ಮೆಚ್ಚಾಗುವ ಇಲ್ಲಿಯ ವಿಡಂಬನೆಯ ರೀತಿ ವಿಲಕ್ಷಣವಾಗಿದೆ.

ಒಟ್ಟಿನಲ್ಲಿ ಅಲ್ಲಮ ಪ್ರಭುವಿನಂತಹ ಕ್ರಾಂತದರ್ಶಿಗಳ ಅಗತ್ಯ ಕನ್ನಡ ರಾಜ್ಯಕ್ಕೆ ಮತ್ತು ಸಾಹಿತ್ಯಕ್ಕೆ, ಅಷ್ಟೇ ಅಲ್ಲ ಸಮಷ್ಟಿಗಾಗಿ ಮತ್ತು ನೂತನ ಸೃಷ್ಟಿಗಾಗಿ ತುಡಿಯುತ್ತಿರುವ ಇಡೀ ಭಾರತದೇಶಕ್ಕೆ ಮತ್ತು ಅದರ ಸಾಹಿತ್ಯಕ್ಕೆ ಅಗತ್ಯವಾದದ್ದು ಆಗಿದೆ. ಅವರ ಇಂತಹ ಧಾಟಿ ಮತ್ತು ಧೋರಣೆಗಳು ಚಿರೇಪ್ಸಿತವಾಗಿವೆ.

★

ಯುವವಾಣಿ

# ಭಗವಾನ್ ಶ್ರೀರಾಮಾನುಜರು

ಸರ್ವ ದೇಶ ದಶಾ ಕಾಲೇ
ಷ್ವವ್ಯಾಹತ ಪರಾಕ್ರಮಾ
ರಾಮಾನುಜಾರ್ಯ ದಿವ್ಯಾಜ್ಞಾ
ವರ್ಧತಾಮಭಿವರ್ಧತಾಮ್
ರಾಮಾನುಜಾರ್ಯ ದಿವ್ಯಾಜ್ಞಾ
ಪ್ರತಿವಾಸರಮುಜ್ವಲಾ
ದಿಗಂತ ವ್ಯಾಪಿನೀ ಭೂಯಾತ್
ಸಾಹಿಲೋಕ ಹಿತೈಷಿಣೀ

ಪ್ರತಿನಿತ್ಯ ನಾವು ಪಠಿಸುವ ಈ ಶ್ಲೋಕದ ಆಶಯವಾದರೂ ಏನು ?

"ಶೇಷಾವತಾರ ಶ್ರೀ ರಾಮಾನುಜಾಚಾರ್ಯರ ಆಜ್ಞೆ ಸಮಸ್ತ ದೇಶ, ಕಾಲ ಹಾಗೂ ಪರಿಸ್ಥಿತಿಗಳಿಗಾಗಿದೆ. ಅದು ಸದಾ ಸಮುಜ್ವಲವಾಗಿದೆ. ಈ ಲೋಕ ಹಿತೈಷಿಣಿಯಾದ ಆಜ್ಞೆ ದಿಗ್ದಿಗಂತಗಳಲ್ಲಿ ವ್ಯಾಪಿಸಿ, ಸದಾ ಹರಡುತ್ತಿರಲಿ" ಎಂಬುದು.

ಸತ್ಯಯುಗದ ಅನಂತಶೇಷ, ತ್ರೇತಾಯುಗದ ಲಕ್ಷ್ಮಣ, ದ್ವಾಪರಯುಗದ ಬಲರಾಮರೇ ಈ ಕಲಿಯುಗದಲ್ಲಿ ಶೇಷಾವತಾರ ಭಾಷ್ಯಕಾರ ಭಗವಾನ್ ಯತೀಂದ್ರ ಶ್ರೀಮತ್ ಜಗದ್ಗುರು ಶ್ರೀ ರಾಮಾನುಜಾಚಾರ್ಯರಾಗಿ ಇಂದಿನಿಂದ ಸುಮಾರು ೧೦೦೦ ವರ್ಷಗಳ ಹಿಂದೆ ಈ ಭೂಮಿಯಲ್ಲಿ ಅವತರಿಸಿದರು. ಮೇಷ ಮಾಸ ಆರಿದ್ರಾನಕ್ಷತ್ರದಲ್ಲಿ, ದಕ್ಷಿಣಭಾರತದ ಭೂತಪುರಿಯಲ್ಲಿ ಶ್ರೀ ಕೇಶವ ಸೋಮಯಾಜಿ – ಕಾಂತಿಮತಿಯರ ಸುಪುತ್ರನಾಗಿ ಜನಿಸಿದಮೇಲೆ ಪರಮಾಚಾರ್ಯರಾದ ಶ್ರೀ ಯಾಮುನಾಚಾರ್ಯರ ಇಚ್ಛಾಪೂರ್ತಿಗಾಗಿ ಶ್ರೀ ಆಚಾರ್ಯರು ತಮ್ಮ ಜೀವನವನ್ನೇ ವಿನಿಯೋಗಿಸಿದರು. ಆ ಸೇತು ಹಿಮಾಚಲ ಇಡೀ ಭಾರತವನ್ನು ಸುತ್ತಿ ತಮ್ಮ ಭಾಗವತ ಧರ್ಮ ಪ್ರಚಾರ ಮಾಡಿದರು.

ಭಗವಂತನ ಸಾಕ್ಷಾತ್ಕಾರಕ್ಕಾಗಿ ಪರತತ್ತ್ವ ನಿರೂಪಣೆ, ವೇದಗಳ ವಾಸ್ತವಿಕ ಅರಿವು, ಎಲ್ಲ ದಿವ್ಯ ದೇಶಗಳಲ್ಲಿ ಪೂಜೆ–ಅರ್ಚನೆಯ ಸಮರ್ಪಕ ವಿಧಿ–ವಿಧಾನಗಳ ವ್ಯವಸ್ಥೆ ಇವರು ಕೈಗೊಂಡ ಮುಖ್ಯ ಕೆಲಸಗಳು. ಅವರು ದಾರ್ಶನಿಕ ವಿಚಾರಗಳಿಂದ ಆಧ್ಯಾತ್ಮಿಕ ಚಿಂತನೆಗೆ ಹೊಸದಿಕ್ಕು ಕೊಟ್ಟು, ಬೇರೆ ಬೇರೆ ದಾರ್ಶನಿಕರ ಹಾಗೂ ಸಿದ್ಧಾಂತವಾದಿಗಳ ನಡುವೆ ಬರುತ್ತಿದ್ದ ವಿರೋಧಗಳನ್ನು ದೂರಗೊಳಿಸಿದರು. ಹಾಗೂ ಎಲ್ಲಕ್ಕಿಂತಲೂ ಹೆಚ್ಚಾಗಿ ಶರಣಾಗತಿ ಮಾರ್ಗ ಬೋಧನೆ ಮಾಡಿ, ಯಾವುದೇ ಭೇದ – ಭಾವಗಳಿಲ್ಲದೆ ಎಲ್ಲರಿಗೂ ಮೋಕ್ಷದ ಅಧಿಕಾರವನ್ನು ತಿಳಿಸಿದರು. ಪೂರ್ವಾಚಾರ್ಯರ ಪೀಠಗಳಿಗೆ ಗೌರವ ಮತ್ತು ಹೊಸ ಪೀಠಗಳ ಸ್ಥಾಪನೆಯಿಂದ ಸಮಾನರೂಪದಲ್ಲಿ ಕರ್ಮಕಾಂಡ ಮತ್ತು ಜ್ಞಾನಕಾಂಡಗಳನ್ನು ಪ್ರತಿಷ್ಠಾಪಿಸಿದರು. ಹೀಗೆ ಇಡೀ ಜಗತ್ತೇ ಅವರಿಂದ ಉಪಕೃತವಾಯಿತು.

ಆಚಾರ್ಯರ ಜೀವನವನ್ನು ಇಂದಿನ ಸಂದರ್ಭದಲ್ಲಿ ನೋಡಿದರೆ ಅವರೊಬ್ಬ ಮಹಾನ್ ಕ್ರಾಂತಿಕಾರಿಗಳಾಗಿದ್ದರು. ಹಳೆಯ ಪರಂಪರೆಯಗಳನ್ನು ಹಾಗೂ ಮಾನ್ಯತೆಗಳನ್ನು ಸಾಹಸಪೂರ್ವಕವಾಗಿ ಮುರಿದು ಸ್ವಮುಕ್ತಿಯ ಸ್ಥಳದಲ್ಲಿ ಸರ್ವಮುಕ್ತಿಯನ್ನು ಜೀವನದಲ್ಲಿ ನಮ್ಮದಾಗಿಸಿಕೊಳ್ಳುವುದೇ ಶ್ರೇಯಸ್ಕರವೆಂದು ತಿಳಿದರು. ಗುರುವಾಜ್ಞೆಗೆ ವಿರುದ್ಧವಾಗಿ ಅತಿಗೋಪ್ಯವಾದ ಮಂತ್ರವನ್ನು ಗೋಪುರವೇರಿ ಸಾಮಾನ್ಯ ಜನರ ಕ್ಷೇಮಕ್ಕಾಗಿ ಉಚ್ಚಕಂಠದಿಂದ ಘೋಷಿಸಿದರು. ಮತ್ತೊಬ್ಬರ ಹಿತಕ್ಕಾಗಿ ನಮ್ಮ ಸ್ವಾರ್ಥಗಳನ್ನು ತೃಣದಂತೆ ತ್ಯಜಿಸುವುದರಲ್ಲಿ ತಾವು ಕಿಂಚಿತ್ತೂ ತಡಮಾಡಲಿಲ್ಲ. ಆದರೆ ಮಾನವೀಯತೆಯ ಎಲ್ಲ ಎಲ್ಲೆಗಳನ್ನು ತ್ಯಜಿಸಿ ನಾವಿಂದು ಮಾಡುತ್ತಿರುವುದೇನು ?. ಧನುರ್ದಾಸನೇ ಅಲ್ಲ, ಅಂತಹ ಅದೆಷ್ಟು ಜನರ ಸಂಸ್ಕಾರಗಳನ್ನು ಸುಧಾರಣೆಗೊಳಿಸಿ ಶ್ರೀ ಆಚಾರ್ಯರು ಅವರ ಉದ್ಧಾರಮಾಡಿದರೋ ತಿಳಿಯದು. ಎಲ್ಲರನ್ನೂ ಒಂದೇ ಪಂಕ್ತಿಯಲ್ಲಿ ಸಮ್ಮಿಲಿತಗೊಳಿಸಿ ಮೇಲು–ಕೀಳೆಂಬ ಭಾವನೆಯನ್ನು ಹೋಗಲಾಡಿಸಿದರು.

ತತ್ಕಾಲದ ದಿಲ್ಲಿಯ ಅಧಿಪತಿ ಯವನ ಚಕ್ರವರ್ತಿಯಿಂದ ಭಗವಾನ್ ಸಂಪತ್ಕುಮಾರನನ್ನು ಹಿಂದಿರುಗಿ ಪಡೆಯಲು ಅವರು ಸಂಘಟಿಸಿದ ವಿಶಾಲ ಸೈನ್ಯದಲ್ಲಿ ಹೆಚ್ಚು ಮಂದಿ ನಿಮ್ನವರ್ಗದವರೇ ಇದ್ದರು. ಭಗವತ್ ಸಂಬಂಧದಲ್ಲಿ ಅವರಿಗೆ ಯಾವುದೇ ಭೇದಭಾವಗಳು ಹಿಡಿಸುತ್ತಿರಲಿಲ್ಲ. ಭಗವಂತನಲ್ಲಿ ಆಸಕ್ತಿ ಹೊಂದಿದ ಯವನ ಸಮ್ರಾಟರ ಪುತ್ರಿಯನ್ನೂ ಸಹ ಅವರು ಗೌರವಪೂರ್ವಕವಾಗಿ ತಮ್ಮ ಪರಿಸರದಲ್ಲಿ ಸೇರಿಸಿಕೊಂಡಿದ್ದನ್ನು ಗಮನಿಸಿದರೆ ನಮಗೆ ಅವರ ವೈಶಾಲ್ಯಮನೋಭಾವ ಸ್ಪಷ್ಟವಾಗುತ್ತದೆ. ಎಲ್ಲ ಪುಣ್ಯಕ್ಷೇತ್ರಗಳಲ್ಲಿ ಭಗವದ್ಭಕ್ತರ ವಿಗ್ರಹಗಳನ್ನು ಪ್ರತಿಷ್ಠಾಪಿಸಿ, ಇಂದಿಗೂ ಪೂಜೆಗೆ ಯೋಗ್ಯವೆನಿಸುವಂತೆ ಔನ್ನತ್ಯ ತೋರಿಸಿದರು. ನಮ್ಮ ಆಳ್ವಾರ್‌ಗಳಲ್ಲಿ ಯಾವುದೇ ವರ್ಗಭೇದವಿರಲಿಲ್ಲವೆಂಬುದಕ್ಕೆ ಒಂದಿಬ್ಬರು ಬ್ರಾಹ್ಮಣೇತರರೂ ಇದ್ದುದೇ ಸಾಕ್ಷಿಯಾಗಿದೆ.

ಆಚಾರ್ಯರು ಒಬ್ಬ ಶ್ರೀಮಂತ ಶಿಷ್ಯನ ಆತಿಥ್ಯವನ್ನು ತ್ಯಜಿಸಿ, ತಮ್ಮ ಒಬ್ಬ ದೀನ-ಹೀನ ಬ್ರಾಹ್ಮಣ ದಂಪತಿಗಳನ್ನು ಕೃತಕೃತ್ಯಗೊಳಿಸಿದ್ದರಿಂದ ಅವರ ದೀನವತ್ಸಲತೆಯ ಪರಿಚಯವಾಗುತ್ತದೆ.

ಬೌದ್ಧರ ಶೂನ್ಯವಾದದ ಪ್ರಭಾವದಿಂದ ಜನ ವೇದಕ್ಕೆ ವಿರುದ್ಧವಾಗಿ ನಾಸ್ತಿಕರಾಗುತ್ತಿದ್ದ ಕಾಲ. ಆ ವೇಳೆಗೆ ಸ್ವಾಮಿ ಶಂಕರಾಚಾರ್ಯರು ಈಶ್ವರಸತ್ತೆಯನ್ನು ಪುನಃ ಸ್ಥಾಪಿಸಿ ವೈದಿಕಧರ್ಮವನ್ನು ಪ್ರಚಾರಗೊಳಿಸಿದರು. ಆದರೆ ಇವರ ಜ್ಞಾನ

ಶ್ರೀ ರಾ. ನ. ನ. ಮೂರ್ತಿ

ಮಾರ್ಗ ಹಾಗೂ ಮೀಮಾಂಸಕರ ಕರ್ಮ ಮಾರ್ಗದಲ್ಲಿ ಪ್ರಬಲ ವಿರೋಧವಾದ ಕಾರಣ ಭಾರತೀಯ ಸಮಾಜ ದಿಗ್ಭ್ರಾಂತವಾಗಿ, ಜಡವಾದಿಗಳ ದುಷ್ಪ್ರಭಾವದಿಂದ ಪಾಪಾಂಧಕಾರಕ್ಕೆ ಹೋಗುತ್ತಿತ್ತು. ಇಂತಹ ಸ್ಥಿತಿಯಲ್ಲಿ ಶ್ರಿಯಃಪತಿಯಾದ ಭಗವಾನ್ ನಾರಾಯಣನ ಪ್ರೇರಣೆಯಿಂದ ಇವರು ಭರತ ಭೂಮಿಯಲ್ಲಿ ಅವತರಿತರಾಗಿ, ಎಲ್ಲ ದರ್ಶನಗಳ-ಶ್ರುತಿಗಳ ಆಧಾರಗಳನ್ನು ಸಮನ್ವಯಗೊಳಿಸಿ ವಿಭಿನ್ನ ಮತಾವಲಂಬಿಗಳಲ್ಲಿದ್ದ ಕಲಹವನ್ನೂ ಶಾಂತಗೊಳಿಸಿ ದೇಶಕ್ಕೆ ದರ್ಶನದ ಒಂದು ಹೊಸ ಮತ್ತು ಸರ್ವಮಾನ್ಯವಾದ ದಿಶೆಕೊಟ್ಟರು. ನಿಶ್ಚಿತವಾಗಿ ಅವರು ಒಂದು ತೇಜಃಪುಂಜವಾಗಿದ್ದರು.

ಸ್ವಾಮಿ ಶಂಕರಾಚಾರ್ಯರು ಮಾರ್ಗ ಮಧ್ಯದಲ್ಲಿ ಬಂದ ದೊಡ್ಡ-ದೊಡ್ಡ ಅಡ್ಡಿ-ಆತಂಕಗಳನ್ನು ತಳ್ಳಿಹಾಕಿದ್ದರು. ಆದರೆ ಮತ್ತು ಸಾಕಷ್ಟು ಜಗಳ – ಬವರಗಳು ಉಳಿದಿದ್ದುವು. ಹೀಗೆ ಉಳಿದುದನ್ನು ರಾಮಾನುಜರು ಬಹಳ ಧೈರ್ಯವಾಗಿ ಎದುರಿಸಿ ಭೂಮಿಯನ್ನು ಸಮತಟ್ಟುಮಾಡಿ, ಅದರಲ್ಲಿ ಭಕ್ತಿರೂಪದ ಬೀಜ ಬಿತ್ತಿದರು. ಅದರ ಅಮೃತಫಲವಾಗಿಯೇ ಆಶ್ರಿತ ಜನಗಳಿಗೆ ಆಪ್ಯಾಯಮಾನವಾಯಿತು. ಸೂರ,ತುಲಸೀ, ಭಕ್ತಮೀರಾರಂತಹ ಸಂತರ ಚರಿತ್ರೆಯಿಂದ ಇದು ತಿಳಿಯುತ್ತದೆ.

ವಿಶೃಂಖಲ ಸಮಾಜವನ್ನು ಏಕತೆಯ ಸೂತ್ರದಿಂದ ಕಟ್ಟಲು ಅವರು ಹಿಂದೆ ಜಗನ್ನಾಥಪುರಿಯಿಂದ ಪಶ್ಚಿಮದಲ್ಲಿ ದ್ವಾರಕಾಪುರಿ ಮತ್ತು ದಕ್ಷಿಣದಲ್ಲಿ ಕನ್ಯಾಕುಮಾರಿ, ಉತ್ತರದಲ್ಲಿ ಬದರೀಕಾಶ್ರಮ ಹಾಗೂ ಕಾಶ್ಮೀರದ ಯಾತ್ರೆ ಮಾಡಿದರು. ಮತ್ತೆ ಎಲ್ಲ ಸ್ತ್ರೀ-ಪುರುಷರಿಗೆ ವರ್ಣಭೇದವಿಲ್ಲದೆ, ಭಗವದ್ ಶರಣಾಗತಿ ಹಾಗೂ ಮೋಕ್ಷದ ಸಮಾನಾಧಿಕಾರ ಕೊಟ್ಟು ಅವರಲ್ಲಿ ಭಾವನಾತ್ಮಕ ಏಕತೆಯನ್ನು ಉಂಟುಮಾಡಿದರು. ನಿಜವಾಗಿ ಅವರು ಉತ್ತರ-ದಕ್ಷಿಣ ಹಾಗೂ ಪೂರ್ವ-ಪಶ್ಚಿಮದ ನಡುವೆ ಒಂದು ಸುದೃಢ ಸಾಂಸ್ಕೃತಿಕ ಸೇತುವೆಯಂತಿದ್ದರು.

ಆಚಾರ್ಯರು ಯಾವುದೇ ದೇಶ, ಕಾಲ ಅಥವಾ ಪಾತ್ರದ ಎಲ್ಲೆಗಳಿಂದ ಬಂಧಿತವಾಗಿರಲಿಲ್ಲ. ಆದರೆ ಇಂತಹ ಮಹೋಪಕಾರಿ ಮಹಾಪುರುಷರನ್ನು ನಾವಿಂದು ಮರೆಯುತ್ತಿದ್ದೇವೆಯಲ್ಲದೆ ಅವರ ಸಾರ್ವಭೌಮ ಶ್ರೀ ಸಂಪ್ರದಾಯ ದಿನೇ-ದಿನೇ ಸಂಕುಚಿತಗೊಳ್ಳುತ್ತಿರುವುದು ತೀರ ದುಃಖದ ವಿಷಯವಾಗಿದೆ.

ಶ್ರೀ ರಾಮಾನುಜರ ಪರಂಪರೆಯಲ್ಲಿ ಇಂದು ನಾವು ಸೇರಿಹೋಗಿದ್ದೇವೆ. ಅವರು ತಮ್ಮ ಮನೆ, ಕುಟುಂಬ, ಸಂಪತ್ತು ಇತ್ಯಾದಿಗಳನ್ನು ಶಾಶ್ವತವಾಗಿ ತ್ಯಜಿಸಿ, ಸಂಪೂರ್ಣ ಜೀವನವನ್ನು ಜನಕಲ್ಯಾಣಾರ್ಥ ಸಮರ್ಪಿಸಿದ್ದಾರೆ. ಆದರೆ ಎಲ್ಲಿ ಏನು ಕೊರತೆ ಎಂದು ವಿಚಾರಿಸಿದ್ದಾದರೆ, ನಾವು ಇಂದಿನ ಪರಿಸ್ಥಿತಿಗಳ ಅನುರೂಪ ನಮ್ಮ ದೃಷ್ಟಿಕೋನವನ್ನು ಬದಲಾಯಿಸಿಲ್ಲ.

ದೇಶದ ಇಂದಿನ ವಿಷಯ ಪರಿಸ್ಥಿತಿಯಲ್ಲಿ ಭಗವಾನ್ ಭಾಷ್ಯಕಾರರ ಮೂಲಕ ತಿಳಿಸಲ್ಪಟ್ಟ ಮಾರ್ಗದಲ್ಲಿ ನಡೆದೇ ನಾವು ಜೀವನದ ಸಫಲತೆಯನ್ನು ಸಾಧಿಸಬಹುದಾಗಿದೆ. ಆದ್ದರಿಂದ ಅವರ ಸಿದ್ಧಾಂತಗಳನ್ನು ಹಾಗೂ ಆದರ್ಶಗಳನ್ನು ಜನಮನದವರೆಗೆ ಮುಟ್ಟಿಸುವುದವಶ್ಯಕ. ಇದಕ್ಕಾಗಿ ನಮ್ಮಲ್ಲಿ ಯಾವುದೇ ಸಾಧನೆಗಳ ಕೊರತೆಯಿಲ್ಲ. ಕೊರತೆಯಿರುವುದಾದರೆ ಅದು ನಮ್ಮ ಇಚ್ಛಾಶಕ್ತಿಯಲ್ಲಿ.

ದುರ್ಲಭೋ ಮಾನುಷೋ ದೇಹೋ
ದೇಹಿನಾಂ ಕ್ಷಣ ಭಂಗುರಃ
ತತ್ರಾಪಿ ದುರ್ಲಭಂ ಮನ್ಯೇ
ವೈಕುಂಠಂ ಪ್ರಿಯದರ್ಶನಮ್ ||
ಆತ್ಯಂತಿಕ ಕ್ಷೇಮ ಪೃಚ್ಛಾಮೋ
ಭಗವತೋಽನಘಾಃ |
ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ
ಸತ್ಸಂಗಃ ಶೇವಧಿರ್ನೃಣಾಮ್ ||

ಓಂ ಶಾಂತಿ ಶಾಂತಿ ಶಾಂತಿಃ

(10ನೇ ಪುಟದಿಂದ)

ಆಲಸ್ಯವಿಲ್ಲದ ಉತ್ಸಾಹಿಗಳಾದ ಪುರುಷರ ಔದ್ಧತ್ಯ, ವೇಗ ಮುಂತಾದುವುಗಳ ನಿವಿಃತ್ತಿಕವಾದ ವ್ಯಾಪಾರವೇ ಆರಭಟಿ ವೃತ್ತಿ, ಸ್ತ್ರೀ ಕರ್ಷಕ ಸೌಂದರ್ಯೋಪಯೋಗಿ ವ್ಯಾಪಾರವೇ ಕೈಶಕೀವೃತ್ತಿ. ಇವುಗಳು ನಾಟ್ಯದಲ್ಲಿ ಪ್ರಧಾನ ಸ್ಥಾನವನ್ನಾಕ್ರಮಿಸುವುವು.

ಮೇಲೆಯೇ ತಿಳಿಸಿರುವಂತೆ ಭರತನ ನಾಟ್ಯ ಶಾಸ್ತ್ರವೇ ಭರತಖಂಡದಲ್ಲಿ ಪ್ರಪ್ರಥಮ ನಾಟ್ಯ ಗ್ರಂಥ. ಆದರ ಕಾಲ ಕ್ರಿ.ಶ. ೪ ನೆಯ ಶತಮಾನ. ಅದಕ್ಕಿಂತ ಎಷ್ಟೋ ಹಿಂದೆ ಭಾರತದಲ್ಲಿ ಕರ್ಣಾಟಕದಲ್ಲಿ ನಾಟ್ಯಕಲೆ ರೂಢಿಯಲ್ಲಿತ್ತೆಂದು ಹೇಳುವುದಕ್ಕೆ ಅನೇಕ ಆಧಾರಗಳಿವೆ. ವಾಸ್ತವವಾಗಿ ಸಂಗೀತದಂತೆ ನೃತ್ಯವೂ. ಪ್ರಕೃತಿಯ ಲಯಬದ್ಧವಾದ ವ್ಯವಸ್ಥೆಗೆ ಮಾನವನು ತೋರಿಸಿದ ದೈಹಿಕ ಪ್ರತಿಕ್ರಿಯೆಯೇ ನಾಟ್ಯಕ್ಕೆ ಮೂಲವೆನ್ನಬಹುದು. ಇದು ಸಂವೇದನೆಗೂ ಭಾವಗಳಿಗೂ ಅನುಗುಣವಾಗಿ ಉಂಟಾಗುವ ಲಯಬದ್ಧವಾದ ಇಂದ್ರಿಯ ಚಲನೆ. ಇದು ಮಾನವನಿಗೇ ಅಲ್ಲದೆ ಪ್ರಕೃತಿಯ ಅನೇಕ ಪ್ರಾಣಿಗಳಿಗೆ ಸಹಜವಾದುದು. ಅನೇಕ ಪ್ರಾಣಿಗಳ ಪ್ರಣಯಸೂಚಕ ನರ್ತನಗಳು ಈ ಮಾದರಿಯವು. ಮನುಷ್ಯನ ಬುದ್ಧಿ ವಿಕಾಸವಾದಂತೆಲ್ಲಾ ಈ ಪ್ರತಿಕ್ರಿಯೆ ಸುವ್ಯವಸ್ಥಿತವಾಗಿ ನಿಷ್ಕೃಷ್ಟ ಆಕಾರವನ್ನು ತಾಳಿರಬೇಕು. ಗೀತವಾದ್ಯಗಳು ಇದಕ್ಕೆ ಹಿನ್ನೆಲೆಯಾಗಿ ಅದರ ಬೆಳವಣಿಗೆಗೆ ಪ್ರೋತ್ಸಾಹಕವಾಗಿರಬೇಕು. ನಮ್ಮ ನಾಟಕಗಳೂ ಮೊದಲು ನೃತ್ಯ ಪ್ರಧಾನವಾಗಿದ್ದು ಕಾಲಾನುಕ್ರಮದಲ್ಲಿ ನೃತ್ಯದ ಸ್ಥಾನ ಕಡಿಮೆಯಾಗಿ ಸಂಭಾಷಣೆಯು ಬೆಳೆಯುತ್ತ ಬಂದಿರಬೇಕು. ಡಿಯೋನಿಸಿಸ್ ದೇವತೆಯ ಬಲಿಗಂಬದ ಸುತ್ತಲೂ ಕುಣಿಯುತ್ತಿದ್ದ ಕುಣಿತವೇ, ಕಡಿಮೆಯಾಗುತ್ತಾ ಬಂದು ಒಂದು, ಎರಡು, ಮೂರು, ನಾಲ್ಕು ಪಾತ್ರಗಳನ್ನು ಬೆಳೆಸಿಕೊಂಡು ಬಂದದ್ದು ಉತ್ತಮ ಉದಾಹರಣೆ.

ಡಾ॥ ಎಂ. ಸಂಗಮೇಶಂ ಎಂಬುವವರು ಭಾರತದಲ್ಲಿ ನಾಟ್ಯಕಲೆಯ ಇತಿಹಾಸವನ್ನು ಕುರಿತು ಒಂದು ಶ್ರೇಷ್ಠ ಲೇಖನವನ್ನು ಬರೆದಿದ್ದಾರೆ. ಅದರ ಸಂಗ್ರಹಾನುವಾದವು ಇಲ್ಲಿಉಪಯುಕ್ತವಾದೀತು. ಅದನ್ನು ಹೀಗೆ ಸಂಗ್ರಹಿಸಬಹುದು.

ಭಾರತದಲ್ಲಿ ನಾಟ್ಯಕಲೆಯು ಮನುಷ್ಯನು ಜೀವಿಸಲು ಪ್ರಾರಂಭಿಸಿದ ದಿನದಿಂದ ಬೆಳೆದು ಬಂದಿದೆ. ಈಗ ಪ್ರಪ್ರಾಚೀನವಾದ ಕಾಲದ ನಾಗರಿಕತೆಯ ಪಂಡಿತರಿಂದ ಪರಿಗಣಿತವಾಗಿರುವ ಹರಪ್ಪ ಮೊಹೆಂಜೊದಾರೋ ನಾಗರೀಕತೆಯಲ್ಲಿಯೂ ಅದನ್ನು ಗುರುತಿಸಬಹುದು. ಅಲ್ಲಿ ಉಪಲಬ್ಧವಾಗಿರುವ ಪದಾರ್ಥಗಳಲ್ಲಿ ಆಭರಣಗಳಿಂದ ಅಲಂಕೃತವಾಗಿರುವ ನಗ್ನ ಸ್ತ್ರೀ ಪ್ರತಿಮೆ ಸಿಕ್ಕಿದೆ. ಇದು ವಿಲಾಸನಾಟ್ಯ ಪ್ರತೀಕವೆಂದು ಪಂಡಿತರು ಅಭಿಪ್ರಾಯಪಡುತ್ತಾರೆ.

ವೈದಿಕ ಸಾಹಿತ್ಯದಲ್ಲಂತೂ ನಾಟ್ಯಕಲೆಯ ವಿಷಯವಾಗಿ ಅನೇಕ ಸೂಚನೆಗಳಿವೆ. ಋಗ್ವೇದದ ವರ್ಣನೆಗಳಿಂದಾಗಿ ಅಂದು ನಾಟ್ಯದಲ್ಲಿ ಧರಿಸಲು ಥಳಥಳಿಸುವ ವಸ್ತ್ರಗಳನ್ನು ಧರಿಸುತ್ತಿದ್ದರೆಂದೂ (೧–೯೨–೬) ಚಿನ್ನದಾಭರಣಗಳನ್ನು ತೊಡುತ್ತಿದ್ದರೆಂದೂ (೬–೨೦–೨೨) ಅಂಗಚಲನಾದಿ ಅಭಿನಯದಲ್ಲಿಯೂ ಸಹ ನೋಡುವವರ ದೃಷ್ಟಿಯನ್ನು ಆಕರ್ಷಿಸುವ ಪ್ರಯತ್ನ ಪ್ರಧಾನವಾಗಿತ್ತೆಂದೂ (೬–೨೯–೩) ವೀರನೃತ್ಯ (೬–೬೩-೫) ವಿಜಯೋತ್ಸವಗಳಲ್ಲಿ ವೃಂದನೃತ್ಯಗಳು (೧೦–೯–೨) ಸಂಗೀತ ನೃತ್ಯಗಳು ಮತ್ತು ಗಾಥಾ ನೃತ್ಯಗಳು ಮೊದಲಾದುವು ಆಚಾರದಲ್ಲಿದ್ದುವೆಂದೂ (೮-೨೪-೧೨) ಸ್ಪಷ್ಟವಾಗಿ ತಿಳಿದು ಬರುತ್ತದೆ. ಆಯಾ ವರ್ಣನೆಗಳಿಂದ ನಾಟ್ಯದಲ್ಲಿ ಪರಿಣತಿ ಪಡೆದ ನಟನಟಿಯರೂ ಸಹ ಆಗ ಇದ್ದರೆಂಬುದು ಏಕನೃತ್ಯಾಭಿನಯ, ವೃಂದನೃತ್ಯಗಳು ಆ ಕಾಲದಲ್ಲೂ ಪ್ರಭಾವಶಾಲಿಯಾಗಿದ್ದಿರಬಹುದೆಂದೂ ತಿಳಿದು ಬರುತ್ತದೆ

ಋಗ್ವೇದದ (೧೦–೧೮–೩) ನಾಟ್ಯದಲ್ಲಿ ನಗುವಿನ ಪ್ರಾಧಾನ್ಯತೆಯನ್ನೂ, (೧೦–೭೨–೬) ರಲ್ಲಿ ನಟರ ಪಾದಚಲನೆಗಳ ವಿಷಯವನ್ನೂ (೧೦–೯೪–೪) ರಲ್ಲಿ ನಟನ ರೀತಿಗಳನ್ನು ತಿಳಿಸುತ್ತದೆ.

ಕಲೆ ಮತ್ತು ನೀತಿ ಎನ್ನುವುದು ಒಂದೇ ತಕ್ಕಡಿಯ ಎರಡು ತಟ್ಟೆಗಳು. ಒಂದು ಮೇಲೇರಿದಾಗ ಮತ್ತೊಂದು ಕೆಳಗಿಳಿಯುವುದು ನಿತ್ಯಸತ್ಯ. ಈ ಏರಿಳಿತಗಳನ್ನು ಸರಿಮಾಡುವ, ಸರಿಹೊಂದಿಸಿ ಸಮಗೊಳಿಸುವ ಪ್ರಯತ್ನವೇ ತತ್ಸಂಬಂಧವಾದ ವಿಧಿವಿಧಾನಗಳಲ್ಲೂ ನಿಯಮ ನಿಷೇಧಗಳಲ್ಲೂ ವ್ಯಕ್ತವಾಗುತ್ತಿರುತ್ತದೆ. ಋಗ್ವೇದಕಾಲದಲ್ಲಿಯೇ ನಾಟ್ಯದಲ್ಲಿ ಬೆರೆತು ಹೋದ ಅನೀತಿ ಅನಂತರದ ಕಾಲಗಳಲ್ಲಿ ಬಗೆಬಗೆಯಾಗಿ ಮಾರ್ಪಾಟಾದವು, ಯಜುರ್ವೇದಕಾಲದಲ್ಲಿ ನರ್ತಕರು ಪ್ರತ್ಯೇಕ ಜಾತಿಯವರಾಗಿ ಪರಿಗಣಿತರಾದರೆಂದು ಕಂಡು ಬರುತ್ತದೆ. ನರ್ತಕರೇ ಅಲ್ಲದೆ ಗಾಯಕರು ವಾದಕರು ಮೊದಲಾದವರೂ ಸಹ ವೈಣಿಕ ವಾಂಶಿಕಾದಿ ಹೆಸರುಗಳಿಂದ ವ್ಯವಹರಿಸುತ್ತಿದ್ದರು. ಅಂದಿಗೆ ವೀಣೆ, ವೇಣು, ಶಂಖ, ಮೃದಂಗ ಮೊದಲಾದ ವಾದ್ಯವಿಶೇಷಗಳೆಷ್ಟೋ ಪ್ರಚಲಿತವಾಗಿದ್ದವು. ಅವುಗಳಲ್ಲಿ ಕಾಣುವಂತಹವು ಎಷ್ಟೋ ಇಂದು ನಮಗೆ ಕಾಣದಾಗಿವೆ.

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾಷ್ಯ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಅರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಸಾಮವೇದವು ಗಾನವೇದವೇ ಆಗಿದೆ. ಅಥರ್ವವೇದದಲ್ಲಿ ಅನೇಕ ವಾದ್ಯ ವಿಶೇಷಗಳು ಸೂಚಿತವಾಗಿವೆ. ಈ ವೇದಗಳಲ್ಲಿ ಸಂಗೀತ ಕಛೇರಿಗೆ ಅನೇಕ ನಿಯಮಗಳು ಹೇಳಲ್ಪಟ್ಟಿವೆ. ಇದೇ ರೀತಿಯಲ್ಲಿ ಬೃಹದಾರಣ್ಯಕ ಛಾಂದೋಗ್ಯಗಳಲ್ಲಿಯೂ, ಋಕ್ ಪ್ರಾತಿಶಾಖ್ಯದಲ್ಲಿ ಬರುವ ವರ್ಣನೆಗಳಿಂದಲೂ ಆಯಾಕಾಲದ ನೃತ್ಯಗೀತಗಳ ಸ್ಥಿತಿಗಳು ಬಹುಮಟ್ಟಿಗೆ ತಿಳಿದು ಬರುತ್ತವೆ. ಸಂಗೀತದಲ್ಲಿ ಸ್ವರ ಪ್ರಸ್ತಾರ ವಿಷಯವಾಗಿಯೂ ಪರಿಶ್ರಮ ನಡೆಯಿತು. ಕಲೆಗಾರರೂ ಬೇರೆ ಬೇರೆ ಕುಲಗಳಾಗಿ ವಿಭಾಗಿಸಲ್ಪಟ್ಟರು.

ಸೂತ್ರಕಾಲದಲ್ಲಿನ ಧಾರ್ಮಿಕ ಕಾರ್ಯಕ್ರಮದಲ್ಲಿ ನಾಟ್ಯ ಅವಶ್ಯಾಚರಣೆಯ ಅಂಗವಾಗಿ ಗ್ರಹಿಸಲ್ಪಟ್ಟಿತು. ಆರಾಧಿಸಲ್ಪಡುವ ದೇವಿದೇವತೆಯರುಗಳೆಲ್ಲ ಗೀತ ಪ್ರಿಯರೂ ನಾಟ್ಯಪ್ರಿಯರೂ ಆಗಿ ಹೆಸರಿಸಲ್ಪಟ್ಟರು. ಧೂಪ ನೈವೇದ್ಯಾದಿಗಳೊಡನೆ ನೃತ್ಯಗಳಿಂದಲೂ ಅವರನ್ನು ಪೂಜಿಸಬೇಕೆಂಬ ವಿಧಿಯುಂಟಾಯಿತು. ದೈವಾರಾಧನೆಯೊಡನೆಯೇ ನೃತ್ಯಗೀತಾದಿಗಳು ಪವಿತ್ರತೆಯನ್ನು ಹೊಂದಿದುವು. ಈ ಪಾವಿತ್ರ್ಯವನ್ನು ಕೆಡದಂತೆ ರಕ್ಷಿಸಬೇಕೆಂದು ಇವುಗಳಿಗೆ ಸಂಬಂಧಿಸಿದ ವಿಧಿನಿಷೇಧಗಳನ್ನು ಸೂತ್ರಪಾಯವಾಗಿ ಕೇಂದ್ರೀಕರಿಸಲು ಪ್ರೋತ್ಸಾಹ ದೊರೆಯಿತು. ಈ ಕಾಲದಲ್ಲಿ ರಚಿತವಾದ ನಾಟ್ಯಸೂತ್ರಗಳು ಈಗ ಉಪಲಬ್ಧವಲ್ಲದಿದ್ದರೂ ಸೂತ್ರರಚನೆ ನಡೆಯಿತೆನ್ನಲು 'ಕರ್ಮಂದಿಕೃಶಾಶ್ವಾದಿನ', ಪಾರಾಶರ್ಯಾಂ ವಾಲಿಖಿಲ್ಯಾಂ' ಭಿಕ್ಷಾಟನ ಸೂತ್ರಯೋ' – ಎಂಬ ವಾಕ್ಯಗಳು ಪ್ರಮಾಣವಾಗಿವೆ. ಇವುಗಳಿಂದಾಗಿ ನಾಟ್ಯಕ್ಕೆ ರೂಪ, ರೇಖೆ, ನೀತಿಗಳು ನಿರೂಪಿತವಾದದ್ದೇ ಅಲ್ಲದೆ ನಟನಟಿಯರಿಗೂ ಸಮಾಜದಲ್ಲಿ ಆದರ ಅಭಿಮಾನ ಪ್ರೋತ್ಸಾಹಗಳು ದೊರೆತವು. ದೇವೋಪಚಾರಗಳೊಂದಿಗೆ ರಾಜೋಪಚಾರಗಳೂ ಇದರ ಸಮಾನವಾದ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದವು. ಹಾಗಾಗಿ ನಾಟ್ಯವು ರಾಜಸೇವೆಯಲ್ಲಿಯೂ ಉಪಾದೇಯವಾಯಿತು. ರಾಜಾಶ್ರಯ, ಸಭಾಗೌರವಗಳು ಪಂಡಿತರೊಡನೆ ನಟನಟಿಯರಿಗೂ ದೊರೆತವು. ಈ ಆದರ ಆಶ್ರಯಗಳು ಕಲೆಗಳ ಅಭಿವೃದ್ಧಿಗೆ ಎಷ್ಟು ಸಹಕರಿಸಿರುವುದೋ ಅಷ್ಟೇ ಮಟ್ಟಿಗೆ ಕಲೆಯನ್ನು ವಿಲಾಸಸಾಧನವನ್ನಾಗಿಸುವುದರಲ್ಲಿಯೂ ಸಹಕರಿಸಿವೆ.

ರಾಮಾಯಣದಲ್ಲಿ ಮಾಂಡಕರ್ಣಿ ವೃತ್ತಾಂತದಿಂದಾಗಲೀ, ರಾವಣನ ಶಯಾನಾಗಾರವರ್ಣನೆಯಲ್ಲಾಗಲೀ ಅಂದಿಗೇ ನೃತ್ಯಗೀತಾದಿಗಳಿಗೂ ವಿಲಾಸಕ್ಕೂ ಅವಿನಾಭಾವ ಸಂಬಂಧ ವಿತ್ತೆಂದ ತಿಳಿದು ಬರುತ್ತದೆ. ಅಯೋಧ್ಯಾಕಾಂಡದ "ವಧೂ ನಾಟಕ ಸಂಘೈಶ್ಚ ಸಂಯುಕ್ತಾಂ ಸರ್ವತ ಪುರಿಂ" ಎನ್ನುವ ಮಾತಿನಿಂದ ಅಂದಿಗೆ ನಾಟ ಸಂಘಗಳಿದ್ದಂತೆಯೂ ಅವುಗಳಲ್ಲಿ ಸ್ತ್ರೀಯರು ಭಾಗವಹಿಸುತ್ತಿದ್ದಂತೆಯೂ ತಿಳಿದುಬರುತ್ತದೆ ಭಾರತದಲ್ಲಿ ರಾಜಸ್ಥಾನಗಳಲ್ಲಿಯೂ ಅಂತ ಪುರಗಳಲ್ಲಿಯೂ ಶೋಭಾಯಮಾನವಾಗಿ ಅನ ಸರಿಸುತ್ತಿದ್ದರೆಂಬುದೇ ಅಲ್ಲದೆ ಯುವಕಯುವ ಯರು ಇತರ ವಿದ್ಯೆಗಳೊಂದಿಗೆ ನೃತ್ಯಗೀತೆಗಳನ್ನು ಅಭ್ಯಾಸಮಾಡುತ್ತಿದ್ದರೆಂದು ತಿಳಿಯಲೂ ಆಧಾ ಗಳಿವೆ. ಅರ್ಜುನನು ಬೃಹನ್ನಳೆಯಾಗಿ ಮಾಡ ತ್ತಿದ್ದ ಕೆಲಸವೂ ಈ ತೆರನಾದುದೇ. ಆದರೆ ಆ ಭಾ ತದಲ್ಲಿಯೇ ನೃತ್ಯವನ್ನು ವೃತ್ತಿಯನ್ನಾಗಿ ಕೊಂ ದವರು ನೀತಿಬಾಹಿರರೆಂದೂ ಸಮಾಜದಲ್ಲಿ ಪಂಕ್ತಿ ಬಾಹಿರ ರೆಂದೂ ವರ್ಣಿಸಲ್ಪಟ್ಟರು. ವಿಚಿತ್ರವೆಂದ ವ್ಯಭಿಚಾರಾದಿ ದೋಷಗಳಾವುವೂ ಕಾಣಿಸಿರಲಿಲ್ಲ ಅಲ್ಲಿ ಅವು ನಿಯತವಾಗಿರುವಂತಹುದಾದು ರಿಂದ ಪಟ್ಟುಹಿಡಿದು ನಿಂದಿಸುವುದಾಗಲೀ ವ್ಯಂಗ ವಾಗಿ ಗುರುತಿಸಿ ಹೀಯಾಳಿಸುವುದಾಗಲೀ ಅನು ಸರವೆಂದು ಭಾವಿಸಿ ಸಮಾಜ ಬಹಿಷ್ಕಾರವೇ ತ ಉಪಾಯವೆಂದು ಭಾವಿಸಿದಂತೆ ಕಾಣುತ್ತದ

ಧರ್ಮ ಶಾಸ್ತ್ರಗಳಾಗಲೀ ಶಿಕ್ಷಾಸ್ಮೃತಿಗಳಾಗಲೀ ನಟರ ಈ ದೋಷಗಳಿಗೆ ಹಿರಿದಾಗಿ ಶಿಕ್ಷೆಯನ್ನು ವಿಧಿಸದಾದವು.

ಬೌದ್ಧ ಜೈನ ವಾಙ್ಮಯದಲ್ಲಿ ನಟರೇ ಅಲ್ಲದೆ ನಾಟ್ಯವೂ ದೂಷ್ಯವೆಂದೇ ಗುರುತಿಸಲ್ಪಟ್ಟಿದೆ. ನಾಟಕ ನೋಡಿದರೆ ತಪ್ಪು, ನಟರೊಡನೆ ಮಾತನಾಡಿದರೆ ಅಪಚಾರ, ನರ್ತಕಿಯರೊಡನೆ ಮಾತಾಡಿದರಂತೂ ಮತ್ತೂ ಹಿರಿಯ ಅನ್ಯಾಯ. 'ವಿನಯಪಿಟಕ' ದಲ್ಲಿ ಒಂದೆಡೆ ಇಂತಹ ದೋಷಗಳಿಗಾಗಿ ಅಶ್ವಜಿತ್ ಪುನರ್ವಸು ಎಂಬ ಭಿಕ್ಷುಗಳಿಗೆ ಪ್ರವ್ರಜನೀಯ ದಂಡ ವಿಧಿಸಿದಂತೆ ತಿಳಿಸಲಾಗಿದೆ. ಜೈನಕಲ್ಪಸೂತ್ರಗಳಲ್ಲಿನ ಕಥೆ ಇನ್ನೂ ವಿಚಿತ್ರವಾಗಿದೆ. ನಟರ ನಾಟಕವನ್ನು ನೋಡಬಾರದು - ಎಂಬ ಸಿದ್ಧಾಂತವನ್ನು ಅಕ್ಷರಶಃ ಪಾಲಿಸಿದ ಒಬ್ಬ ಪ್ರೌಢ ಶ್ರಮಣನು ನಟಿಯರ ನಾಟಕವನ್ನು ನೋಡಿಬಂದು ತಾನು ನಿರ್ದೋಷಿಯೆಂದು ವಾದಿಸಿದನಂತೆ. ಈ ಸಂಬಂಧವಾದ ಕಥೆಗಳಿಂದ ಆಗಿನ ಕಾಲದಲ್ಲಿಯೂ ನಮ್ಮ ದೇಶದಲ್ಲಿ ನಟನಟಿಯರೂ, ನಾಟ್ಯಸಂಘಗಳೂ ತನ್ವಿಲಾಸ ವಿಹಾರಗಳೂ ಅದರಲ್ಲಿ ವಿಭಿನ್ನತೆಗಳೂ ಇದ್ದುವೆಂದು ತಿಳಿದುಬರುತ್ತದೆ. ಇಷ್ಟೇ ಅಲ್ಲ, ಸರಗುಜಾ ರಾಜ್ಯದಲ್ಲಿನ ರಾಮಘಟಿ ಬೆಟ್ಟಗಳಲ್ಲಿ ಸಭಾಭವನ ವಿಶ್ರಾಂತಭವನಗಳು ಕಲ್ಲಿನಲ್ಲಿ ನಿರ್ಮಿಸಲ್ಪಟ್ಟವು. ಆಗಣ ಶಿಲಾಶಾಸನ (ಕ್ರಿ. ಪೂ. ೩೨೦) ದಂತೆ ಅದು ಸುತನೂ ಎಂಬ ನರ್ತಕಿಯಿಂದ ನಿರ್ಮಾಣವಾಯಿತೆಂದು ತಿಳಿಯುತ್ತದೆ. ಹೀಗೆ ತಮಗೆ ಬೇಕಾದ ಸೌಲಭ್ಯಗಳನ್ನು ನಟರು ಸ್ವತಃ ಮಾಡುತ್ತಿದ್ದರಲ್ಲದೆ, ರಾಜರೂ ಸೂಕ್ತ ಸೌಲಭ್ಯಗಳನ್ನು ಒದಗಿಸುತ್ತಿದ್ದರು. ಕೌಟಿಲ್ಯನ 'ಅರ್ಥಶಾಸ್ತ್ರ' ದಲ್ಲಿ ಗೀತವಾದನ ನೃತ್ಯಗಳನ್ನು ಪೋಷಿಸಿ ಅಭಿವೃದ್ಧಿ ಪಡಿಸುವ ಕರ್ತವ್ಯ ಪ್ರಭುತ್ವದ್ದೆಂದು ಸ್ಪಷ್ಟವಾಗಿ ಹೇಳಿದೆ. ಅದೇ 'ಅರ್ಥಶಾಸ್ತ್ರ'ದಲ್ಲಿ ಶೂದ್ರಸ್ಯ ದ್ವಿಜಾತಿ ಶುಶ್ರೂಷಾ ವಾರ್ತಾಕಾರ ಕುಶೀಲವ ಕರ್ಮಚ' ಎನ್ನುತ್ತ ನಟರನ್ನು ಶೂದ್ರರೆಂದು ನಿರ್ದೇಶಿಸಿರುವುದೂ ಉಂಟು. ಪತಂಜಲಿಯ ಕಾಲಕ್ಕೆ (ಕ್ರಿ.ಪೂ. ೧೫೦) ಶೈಲೂಷರು, ಶೋಭನಕರು, ಕುಶೀಲವರು ಮೊದಲಾದವರೆಲ್ಲ ನಾಟ್ಯವನ್ನು ಉಪಜೀವನವನ್ನಾಗಿ ಗ್ರಹಿಸಿ ದೇಶದ ನಾಲ್ಕು ಮೂಲೆಗಳಲ್ಲಿಯೂ ವ್ಯಾಪಿಸಿದ್ದಂತೆ ಕಂಡುಬರುತ್ತದೆ.

ಹೆಚ್ಚು ಕಡಿಮೆ ಇದೇ ಕಾಲದಲ್ಲಿ ಎಂದರೆ ಕ್ರಿ. ಶ. ೨೦೦ ವರ್ಷದ ಸುಮಾರಿನಲ್ಲಿ ಭರತನ ನಾಟ್ಯಶಾಸ್ತ್ರ ರಚಿತವಾಯಿತು. ಅಂದಿನ ಕಲಾನೈಪುಣ್ಯವೆಲ್ಲ ಇದರಲ್ಲಿ ಸಂಗ್ರಹಿಸಲ್ಪಟ್ಟಿದೆ. ನಾಟ್ಯಕ್ಕೆ ಸಂಬಂಧಿಸಿದ ಗೀತವಾದ್ಯಗಳ ವಿಷಯವಾಗಿಯೂ ವಿಸ್ತಾರವಾಗಿ ತಿಳಿಸಿದ್ದಾನೆ. ನಾಟ್ಯಮಂದಿರ ನಿರ್ಮಾಣದಿಂದ ಹಿಡಿದು, ನಟರ ವೇಷಭೂಷಣಗಳ ರೀತಿ, ವಿವಿಧ ಪ್ರಾಂತಗಳ ಭಾಷೆಗಳ ವ್ಯವಹಾರದ ರೀತಿ, ನಟರಿಗೆ ಬೇಕಾದ ಆಚಾರ ವ್ಯವಹಾರಗಳ ವಿವರಗಳೆಲ್ಲ ವಿವರಿಸಲಾಗಿದೆ. ಅಂದು ಪ್ರಚಲಿತವಾಗಿದ್ದ ಓಢ್ರ, ಮಾಗಧ, ಅವಂತೀ, ದಾಕ್ಷಿಣಾತ್ಯ ಮೊದಲಾದ ಪ್ರಾದೇಶಿಕ ವಿಭೇದಗಳನ್ನು ತಿಳಿಸಲಾಗಿದೆ. ಅಂಗಪ್ರತ್ಯಂಗಗಳಲ್ಲಾಗಲೀ, ಹಸ್ತಸಾಮುದ್ರಿಕದಲ್ಲಾಗಲೀ ಚಿತ್ರವಿಚಿತ್ರಾಭಿನಯದಲ್ಲಾಗಲೀ ರಸವಿಷಯದಲ್ಲಾಗಲೀ ಎಚ್ಚರವಹಿಸಿ,ಸೂಕ್ಷ್ಮಾತಿಸೂಕ್ಷ್ಮ ಪ್ರಭೇದಗಳನ್ನು ಗುರುತಿಸಿ, ಅವುಗಳ ಪ್ರಯೋಗ ವಿನಿಯೋಗಗಳನ್ನು ವಿವರಿಸಿ ಇಂತಹ ಗ್ರಂಥ 'ನ ಭೂತೋ ನ ಭವಿಷ್ಯತಿ'ಯಾಗಿ ರಚಿತವಾಗಿದೆ. ಅನಂತರ ಈ ವಿಷಯದಲ್ಲಿ ರಚಿತವಾದ ಗ್ರಂಥಗಳೆಲ್ಲ ಭರತನಿಗೆ ಋಣಿಯಾದಂತಹವೇ, ಯಾರು ಹೇಳಿದರೂ ಭರತನಂತೆಯೇ, ಏನು ಹೇಳಿದರೂ ಭರತನೇ! 'ಅರ್ಜುನ ಭರತ', 'ನಂದಿಕೇಶ್ವರ ಭರತ', 'ನಾರದ ಭರತ', 'ಹನುಮದ್ಭರತ', 'ಜೈಮಿನಿ ಭರತ'—ಹೀಗೆ ಹಲವಾರು. ನೃತ್ಯಗೀತಗಳೇ ಭರತವೆಂದೂ ಅವುಗಳನ್ನು ಕಲಿತವರು ಭರತರೆಂದೂ ರೂಢಿಯಾಗಿದೆ, ಇವೆಲ್ಲವನ್ನೂ ಕಂಡ 'ಸಂಕಲ್ಪ ಸೂರ್ಯೋದಯ'ದ ಕರ್ತೃಗಳಾದ ವೇದಾಂತ ದೇಶಿಕರು ತಮ್ಮ ಭರತ ಶಬ್ದ ಪ್ರತ್ಯೇಕವಾಗಿ ಯಾವ ವ್ಯಕ್ತಿಗೂ ಕಾಲಕ್ಕೂ ಸಂಬಂಧಿಸಿದುದಲ್ಲವೆಂದು ಭಾವ, ರಾಗ, ತಾಳಗಳೆಂಬ ಶಬ್ದಗಳ ಪ್ರಥಮಾಕ್ಷರಗಳನ್ನು ಜೋಡಿಸಿ ನೃತ್ಯ, ಗೀತ, ವಾದ್ಯ ಮೊದಲಾದ ವಿದ್ಯೆಗಳಿಗೆ ಪರ್ಯಾಯವಾಗಿ ಭರತಶಿಲ್ಪವನ್ನು ಆಚರಣೆಗೆ ತಂದರು. 'ನಾಟ್ಯಶಾಸ್ತ್ರ'ವೂ ಏಕಕರ್ತೃಕವೆಂದು ಹೇಳಿದ್ದರೂ ಅದು ಹಾಗಿರಲಾರದು. ಅಗತ್ಯ ವಿಷಯಗಳೊಂದಿಗೆ ಅನಗತ್ಯವಾದ ಛಂದಸ್ಸು, ಅಲಂಕಾರ, ಪ್ರಶಂಸೆಗಳೆಲ್ಲ ಇದರಲ್ಲಿ ಕಂಡುಬರುತ್ತದೆ. ಇದು ಭರತರಿಗೆ ಬೇಕಾದ ಎಲ್ಲ ವಿಷಯಗಳ ಸಂಗ್ರಹವಿದ್ದಿರಬೇಕು. ಏನಿಲ್ಲದ್ದಿರೂ ಶಾಸ್ತ್ರವಿಷಯದಲ್ಲಿ ಈ ಗ್ರಂಥವನ್ನು ಮೀರಿಸುವ ಗ್ರಂಥ ಇನ್ನೊಂದಿಲ್ಲ. ನಾಟ್ಯಕ್ಕೆ ನೀತಿನಿಯಮಗಳನ್ನು ನಿರ್ಧರಿಸಿ ಶಾಸ್ತ್ರೀಯತೆಯನ್ನು ಸಂಪಾದಿಸಿಕೊಟ್ಟ ಕೀರ್ತಿ ಈ ಗ್ರಂಥಕ್ಕೆ ಸಲ್ಲುವಷ್ಟು ಮತ್ತಾವ ಗ್ರಂಥಕ್ಕೂ ಸಲ್ಲುವುದಿಲ್ಲ. ಇದನ್ನು ನಿಸ್ಸಂದೇಹವಾಗಿ ನಾಟ್ಯವೇದವೆಂದು ಕರೆಯಬಹುದು.

ಕ್ರಿ.ಶ. ದ ಪ್ರಾರಂಭದಲ್ಲಿರಬಹುದಾದ ಅಶ್ವಘೋಷನ ಚರಿತ್ರೆಯು ಆಮ್ರಪಾಲಿ ಎಂಬ ನರ್ತಕಿಯ ಜೀವನ ಚರಿತ್ರೆಯೊಡನೆ ಸಂಬಂಧ ಹೊಂದಿಕೊಂಡಿರುವಂತೆ ಕಾಣುತ್ತದೆ. ಭಾಸನ 'ಪ್ರತಿಮಾ ನಾಟಕ'ದಲ್ಲಿ ರಾಮನ ಪಟ್ಟಾಭಿಷೇಕ ಕಾಲದಲ್ಲಿ ನಟರನ್ನು ಕರೆಸಲು ಕಳುಹಿಸಿದಂತೆ ಹೇಳಲಾಗಿದೆ. ಈತನ 'ಬಾಲಚರಿತ್ರ'ದಲ್ಲಿಯೂ ನೃತ್ಯಗೀತಾದಿಗಳ ಪ್ರಶಂಸೆ ಕೇಳಿಬರುತ್ತದೆ. ಕಾಳಿದಾಸನ ಕಾಲದಲ್ಲಿ ಎಲ್ಲ ಕಲೆಗಳೂ ಉನ್ನತ ಸ್ಥಿತಿಯಲ್ಲಿದ್ದಂತೆ ಕಾಣುತ್ತದೆ. ಈತನ 'ಮಾಳವಿಕಾಗ್ನಿಮಿತ್ರ'ದಲ್ಲಿ ನಾಟ್ಯ ಪ್ರಶಂಸೆಯಲ್ಲದೆ ನಾಟ್ಯಪರೀಕ್ಷೆಯೂ ನಡೆಯುವುದು. 'ವಿಕ್ರಮೋರ್ವಶೀಯ'ದ ನಾಲ್ಕನೆಯ ಅಂಕವು ನೃತ್ಯಗೀತ ಪ್ರದರ್ಶನಕ್ಕೆಂದೇ ಮೀಸಲಾಗಿದೆ. ಹರ್ಷನ ನಾಟಕಗಳಲ್ಲಿ ಅಂದಿನ ಉಚ್ಚವರ್ಗದ ತರುಣತರುಣಿಯರೆಲ್ಲ ನೃತ್ಯಗೀತಗಳನ್ನು ತಿಳಿದವರಂತೆ ವರ್ಣಿಸಲಾಗಿದೆ. ಮುಂದಿನ ನಾಟಕಗಳಲ್ಲಿ ಅವಶ್ಯ ಪ್ರದರ್ಶನೀಯವೆಂಬ ಭಾವನೆ ಇಲ್ಲದಿದ್ದರೂ ಒಂದರಿಂದ ಏಳನೆಯ ಶತಮಾನದವರೆಗಿನ ಗ್ರಂಥಗಳಲ್ಲಿ ನೃತ್ಯಗೀತಾದಿಗಳು ಪ್ರಶಂಸಿಸಲ್ಪಟ್ಟಿವೆ. ಅವುಗಳಲ್ಲಿ ನಾಟ್ಯದ ಶಾಸ್ತ್ರೀಯ ವಿಷಯಗಳೂ ಉಕ್ತವಾಗಿವೆ. 'ವಿಷ್ಣುಧರ್ಮೋತ್ತರ ಪುರಾಣ'ದಲ್ಲಿ ನಾಟ್ಯವನ್ನು ಕುರಿತು ವಿಶೇಷವಾಗಿ ಬರೆಯಲ್ಪಟ್ಟಿದೆ.

ಎಂಟನೆಯ ಶತಮಾನದಿಂದೀಚೆಗೆ ಮಹಮ್ಮದೀಯರ ಆಕ್ರಮಣದಿಂದ ಕಲಾಸಾಹಿತ್ಯಗಳಿಗೆ ಪ್ರೋತ್ಸಾಹ ತಪ್ಪಿತು. ಆದರೆ ಮತ್ತೆ ಭಕ್ತಿಸಂಪ್ರದಾಯಗಳು ತಲೆದೋರಿದುವು. ಅರ್ತತ್ರಾಣಪರಾಯಣನಾದ ಸಗುಣ ಪರಮಾತ್ಮನೇ ಭಕ್ತಿಗೆ ಅವಲಂಬನವಾಗಿ ನಿಂತ. ಭಕ್ತಿಯಲ್ಲಿ ದಾಸ್ಯ, ಸಖ್ಯ, ವಾತ್ಸಲ್ಯ, ಶೃಂಗಾರಾದಿ ಭಾವನೆಗಳೆಷ್ಟೋ ವಿಕಾಸವಾದುವು. ಜಯದೇವನ 'ಗೀತಗೋವಿಂದ'ದಿಂದ ಈ ಶೃಂಗಾರ ಭಕ್ತಿಯಲ್ಲಿ ನೃತ್ಯಗೀತೆಗಳಿಗೆ ಮತ್ತೆ ಸ್ಥಾನ ದೊರೆಯಿತು.

ಮೊದಲು ಭಕ್ತರು ತನ್ಮಯರಾಗಿ ಹಾಡಿ ಆಡತೊಡಗಿದರು. ಭಕ್ತಿಯ ಮೇಲೆ ಒತ್ತಡ ಬಿದ್ದಾಗ ನೃತ್ಯಗೀತೆಗಳಿಗೆ ಶಾಸ್ತ್ರೀಯತೆಯ ಹಿಡಿತ ತಪ್ಪಿ ಸಡಿಲ ಹೊಂದಿ ಸ್ವಚ್ಛಂದತೆ ಹೆಚ್ಚಿತು. ಅಂದಿನ ಕಾಲದಲ್ಲಿ ದೇಶದಲ್ಲಿ ಸ್ಥಿರವಾದ ಮುಸ್ಲಿಂ ದರ್ಬಾರುಗಳಲ್ಲಿನ ರಾಜಾಶ್ರಯವನ್ನಪೇಕ್ಷಿಸಿದ ನೃತ್ಯ ತದಭಿರುಚಿಗನುಗುಣವಾಗಿ ಇನ್ನೂ ಸ್ವತಂತ್ರವಾಗಿ ಕೊನೆಗೆ ಸಂಕರವಾಗಿ ತನ್ನ ಮೂಲರೂಪವನ್ನು ಮರೆತುಹೋಗುವ ಸ್ಥಿತಿಗೆ ಬಂದು ಮಕಾಂತರಗೊಂಡವು. ಆದರೆ ದಕ್ಷಿಣ ಭಾರತದಲ್ಲಿ ಇಂತಹ ಗೊಂದಲಕರ ವಾತಾವರಣವಿಲ್ಲದುದರಿಂದ ಇಲ್ಲಿ ಮಾತ್ರ ಈ ಕಲೆಗಳು ತಮ್ಮ ಪ್ರಾಚೀನ ರೂಪವನ್ನು ಸ್ಥಿರಗೊಳಿಸುತ್ತ ಬಂದವು.

---

(12ನೇ ಪುಟದಿಂದ)

ತಾವೇ ಸಚ್ಚಿದಾನಂದ ಸ್ವರೂಪನೆಂದೂ ಮಹಾಪೂರ್ಣರು ಅವರಿಗೆ ಆಚಾರ್ಯರೆಂದೂ ತಿಳಿದುಕೊಂಡರು. ಇದು ಅರ್ಚಾವತಾರದ ನಿದರ್ಶನ, ತಮ್ಮ ಗುರುಗಳಾದ ಮಹಾಪೂರ್ಣರು ತಮ್ಮನ್ನು ಬಿಟ್ಟು ಶ್ರೀರಂಗಕ್ಕೆ ಪತ್ನೀಸಮೇತರಾಗಿ ಹೋದುದರಿಂದ ತಾವು ವರದರಾಜರ ಸನ್ನಿಧಿಯಲ್ಲಿ ಸನ್ಯಾಸ ತ್ರಿದಂಡಿಧಾರಿಗಳಾಗಿ "ಯತಿರಾಜ" ಎಂಬ ಹೆಸರಿಂದ ಶೋಭಿಸುತ್ತಾರೆ. ಇದು ರಾಮಾನುಜರಿಗೆ ಅರ್ಚಾವತಾರದಲ್ಲಿದ್ದ ಭರವಸೆ. ಅಲ್ಲಿಂದಾಚೆಗೆ ರಾಮಾನುಜರು ಶ್ರೀರಂಗಕ್ಷೇತ್ರಕ್ಕೆ ಹೋಗಿ ನೆಲಸಿ ತಮ್ಮ ಜೀವನ ಪರ್ಯಂತ ಶ್ರೀ ವರದರಾಜಸ್ವಾಮಿಯ ಮೂರ್ತಿಯನ್ನು ಪೂಜಿಸುತ್ತಿದ್ದರು. ಒಮ್ಮೆ ರಾಮಾನುಜರು ಅದ್ವೈತಿಗಳೊಬ್ಬರೊಡನೆ ವಾದಕ್ಕೆ ನಿಂತು, ಶ್ರೀ ವರದರಾಜಸ್ವಾಮಿಯನ್ನು ಧ್ಯಾನಿಸಿ ವಾದದಲ್ಲಿ ಗೆಲ್ಲುತ್ತಾರೆ, ಇದೂ ಒಂದು ಅವರಿಗೆ ಅರ್ಚಾವತಾರದಲ್ಲಿದ್ದ ನಂಬಿಕೆ.

ಮೇಲುಕೋಟೆ ಕ್ಷೇತ್ರದ ಮತ್ತು ಅಲ್ಲಿಯ ಅರ್ಚಾವತಾರದ ವೈಭವವನ್ನು ಆಳ್ವಾರರುಗಳು ಹಾಡಿಲ್ಲವೆಂದು ಕಾಣುತ್ತದೆ, ಆದರೆ ಈ ಕ್ಷೇತ್ರವು ಮಹಿಮಾನ್ವಿತವಾದುದು. ಆಚಾರ್ಯ ಪುರುಷರಲ್ಲಿ ಅಗ್ರಗಣ್ಯರಾದ ರಾಮಾನುಜರೇ ಈ ಕ್ಷೇತ್ರ ನಿರ್ಮಾಣಕ್ಕೆ ಕಾರಣಕರ್ತರು. ಅಲ್ಲದೆ ಈ ಕ್ಷೇತ್ರದ ದೇವಾಲಯದಲ್ಲಿ ಉತ್ಸವ ಮೂರ್ತಿ ಇರಲಿಲ್ಲ. ಅವರ ಕನಸಲ್ಲಿ ಉತ್ಸವಮೂರ್ತಿ ಇರುವ ಸ್ಥಳವನ್ನರಿತು ದೆಹಲಿ ಪ್ರಾಂತಕ್ಕೆ ಹೋಗಿ ದೆಹಲಿಯ ದೊರೆಯಾದ ಮುಸಲ್ಮಾನ ರಾಜರಲ್ಲಿ ಉತ್ಸವಮೂರ್ತಿ ಕೊಡುವಂತೆ ಅರಿಕೆ ಮಾಡುತ್ತಾರೆ. ಅವರ ಬೇಡಿಕೆಗೆ ನವಾಬರು ಮೂರ್ತಿಯನ್ನು ತೆಗೆದುಕೊಂಡು ಹೋಗಲು ಅನುಮತಿ ಇತ್ತು ಅಂತಃಪುರಕ್ಕೆ ಕಳುಹಿಸಿಕೊಡುತ್ತಾರೆ. ರಾಮಾನುಜರು ಕೋಣೆಯಲ್ಲಿ ಕಾಣದೆ ಆಸ್ಥಾನಕ್ಕೆ ಬಂದು ನಿವೇದಿಸಿದರು. ನವಾಬರು ಆಚಾರ್ಯರಿಗೆ ಅನುಮತಿ ಇತ್ತು ತಾವೇ ಆ ಮೂರ್ತಿ ಇರುವುದನ್ನರಿತು ತೆಗೆದುಕೊಂಡು ಹೋಗಲು ಹೇಳಿದರು. ರಾಮಾನುಜರು ದೈನ್ಯದಿಂದಲೂ ವಾತ್ಸಲ್ಯದಿಂದಲೂ ಮೂರ್ತಿಯನ್ನು ಬಾರೆಂದು ಕರೆಯಲು ಆ ಮೂರ್ತಿ ಮಗುವಿನಂತೆ ಬಂದು ತೊಡೆಯೇರಿತು. ಆನಂದದಿಂದ ಮೂರ್ತಿಯನ್ನು "ನನ್ನ ಸಂಪತ್ ಕುಮಾರ" ಎಂದು ತಬ್ಬಿಕೊಂಡು ಅದರು ಮೇಲುಕೋಟೆಗೆ ತಂದು ನಿತ್ಯಪೂಜೆ ನಡೆಯಲು ತಕ್ಕ ಏರ್ಪಾಡುಮಾಡಿದರು.

ರಾಮಾನುಜರು ಉತ್ತರದೇಶದ ಪ್ರವಾಸ ಮುಗಿಸಿ ಬರುವಾಗ್ಗೆ ತಿರುಪತಿಗೆ ಸಂದರ್ಶನವಿತ್ತರು ಆಗ್ಗೆ ತಿರುಪತಿಯಲ್ಲಿ ಶ್ರೀ ವೆಂಕಟೇಶ್ವರ ಮೂರ್ತಿಯು "ಶಿವ"ನೆಂದು ಕೆಲವರು, "ವಿಷ್ಣು"ವೆಂದು ಕೆಲವರೂ ಹೇಳುತ್ತಾ ಜಿಜ್ಞಾಸೆಯಲ್ಲಿದ್ದರು. ರಾಮಾನುಜರು ಬರುತ್ತಲೇ ಅವರಲ್ಲಿಗೆ ಎರಡೂ ಪಂಗಡಗಳವರು ಹೋಗಿ ತೀರ್ಮಾನಕ್ಕೆ ಅವರಲ್ಲಿ ಮನವಿ ಮಾಡಿಕೊಂಡರು, ರಾಮಾನುಜರು ವೈಷ್ಣವ ಚಿಹ್ನೆಗಳಾದ ಶಂಖ ಮತ್ತು ಚಕ್ರಗಳನ್ನೂ, ಶೈವ ಚಿಹ್ನೆಗಳಾದ ತ್ರಿಶೂಲ ಮತ್ತು ಡಮರುಗಳನ್ನೂ ತರಿಸಿ ಆದಿನ ರಾತ್ರಿ ಗರ್ಭಗೃಹದಲ್ಲಿರಿಸಿ ಬಾಗಿಲಿಗೆ ಬೀಗ ಹಾಕಿ ಸ್ವಾಮಿಯಲ್ಲಿ ಪ್ರಾರ್ಥನೆ ಸಲ್ಲಿಸಿದರು. ಪ್ರಾರ್ಥನೆ; ತಿರುಪತಿಯಲ್ಲಿರುವ ಮೂರ್ತಿ ವಿಷ್ಣುವಾದಲ್ಲಿ ಶಂಖ ಚಕ್ರಗಳನ್ನು ರಾತ್ರಿ ಧರಿಸಿಕೊಳ್ಳಲಿ. ಶಿವಮೂರ್ತಿಯಾದಲ್ಲಿ ಶೈವ ಚಿಹ್ನೆಗಳನ್ನು ಧರಿಸಲಿ ಎಂದು. ಮಾರನೆಯ ದಿನ ಬೆಳಗ್ಗೆ ಅರ್ಚಕರು ಬಾಗಿಲು ತೆರೆಯುತ್ತಾರೆ. ಮೂರ್ತಿಯು ಶಂಖ ಚಕ್ರಗಳನ್ನು ಧರಿಸಿರುವುದು ನೋಡಿ ತಿರುಪತಿ ಕ್ಷೇತ್ರದ ಮೂರ್ತಿಯು ಮಹಾವಿಷ್ಣುವೆಂದು ನಿರ್ಧರವಾಗಿ, ಅಂದಿನಿಂದ ಮೂರ್ತಿಗೆ ಊರ್ಧ್ವ ಪುಂಡ್ರ ಮತ್ತು ತಿಲಕಗಳಿಂದ ಅಲಂಕರಿಸಲಾರಂಭವಾಯಿತು. ಪ್ರತಿ ಶುಕ್ರವಾರ ಸ್ವಾಮಿಗೆ ಅಭಿಷೇಕವೂ, ಪ್ರತಿ ಗುರುವಾರ ರಾತ್ರಿ ಪೂಲಂಗಿಸೇವೆಯೂ ನಡೆಯುವಂತೆ ಏರ್ಪಾಡಾಯಿತು. ಮತ್ತೊಂದು ಸಂದರ್ಭದಲ್ಲಿ ಚೋಳರಾಜನು ಗೋವಿಂದಸ್ವಾಮಿಯ ವಿಗ್ರಹವನ್ನು ಸಮುದ್ರದಲ್ಲಿ ಎಸೆದಿರುತ್ತಾನೆ, ಆ ವಿಗ್ರಹವನ್ನು ರಾಮಾನುಜರು ತಂದು ತಿರುಪತಿ ಬೆಟ್ಟದ ತಪ್ಪಲಲ್ಲಿ ಪ್ರತಿಷ್ಠೆ ಮಾಡಿ ದೇವರಾಯನಿಂದ ದೇವಾಲಯವನ್ನು ಕಟ್ಟಿಸುತ್ತಾರೆ. ಹಾಗೂ ಇದೇ ದೇಗುಲದ ಒಂದು ಕಡೆ ಆಂಡಾಳ್ ಸನ್ನಿಧಿಯನ್ನೂ ಸ್ಥಾಪಿಸುತ್ತಾರೆ, ಇದೆಲ್ಲ ಸಂದರ್ಭಗಳನ್ನೂ ನೋಡಿದಲ್ಲಿ ಶ್ರೀ ರಾಮಾನುಜರಿಗೆ ಅರ್ಚಾವತಾರದಲ್ಲಿ ಎಷ್ಟು ನಂಬಿಕೆ ಮತ್ತು ಭಕ್ತಿ ಇತ್ತೆಂದು ತಿಳಿಯಬಹುದು. ಇದಲ್ಲದೆ ಭಗವಾನರು ದೇವಾಲಯಗಳಲ್ಲಿ ನಡೆಯುವ ಪೂಜಾ ವಿಧಾನಗಳನ್ನು ನಿಗಧಿಮಾಡಿದರು. ಶ್ರೀರಂಗದಲ್ಲಿ ಪಾಂಚರಾತ್ರ ಆಗಮಪ್ರಕಾರವೂ ತಿರುಪತಿಯಲ್ಲಿ ವೈಖಾನಸ ಆಗಮ ಪ್ರಕಾರವೂ ಆರಾಧನೆ ನಡೆಯುವಂತೆ ಏರ್ಪಡಿಸಿದರು. ನಿತ್ಯೋತ್ಸವ, ಪಕ್ಷೋತ್ಸವ ಮಾಸೋತ್ಸವ ಮತ್ತು ವರ್ಷೋತ್ಸವಾದಿಗಳು ನಡೆಸುವುದನ್ನು ನಿಯಮಿಸಿದರು. ಅವುಗಳ ವಿಧಾನಗಳನ್ನೂ ಮತ್ತು ಕ್ರಮಬದ್ಧವಾಗಿ ನಡೆಯುವುದನ್ನು ನಿರ್ದೇಶಿಸಿದರು. ಪಾಂಚರಾತ್ರಾಗಮದಲ್ಲಿ ಸ್ವಾಮಿಗೆ ಪೂಜೆ ಗೈಯುವಂದು (ಆರು) ಆಸನಗಳನ್ನು ಸಮರ್ಪಿಸಿ ಉಪಚಾರ ಮಾಡಬೇಕು. ಮಂತ್ರಾಸನ, ಸ್ನಾನಾಸನ, ಅಲಂಕಾರಾಸನ, ಭೋಜ್ಯಾಸನ, ಸಿಂಹಾಸನ ಮತ್ತು ಪರ್ಯಂಕಾಸನ ಇವೇ ಆರು ಆಸನಗಳು. ಈ ಆಸನಗಳನ್ನು ಸಮರ್ಪಿಸಿ ಆಯಾ ಸಮಯದಲ್ಲಿ ಸ್ವಾಮಿಯವರಿಗೆ ಉಪಚಾರಗಳನ್ನು ಮಾಡಲಾಗುತ್ತದೆ. ರಾಮಾನುಜರು ಮಾಡಿದ ಕಟ್ಟಳೆಗಳು ಎಂದೆಂದೂ ವೃದ್ಧಿ ಪಡೆಯುತ್ತಿರಬೇಕು, ಮತ್ತು ಮತ್ತೆ ಮತ್ತೆ ಅಭಿವೃದ್ಧಿಯಾಗುತ್ತಿರಬೇಕು, ಇದು ಸರ್ವಕಾಲಕ್ಕೂ ಸರ್ವರಿಗೂ ಅನ್ವಯಿಸುವಂತಹುದು. ಈ ಆಜ್ಞೆ ಹೀಗಿದೆ.

ಸರ್ವದೇಶದಶಾಕಾಲೇ ಅವ್ಯಾಹತ ಪರಾಕ್ರಮ
ರಾಮಾನುಜಾರ್ಯ ದಿವ್ಯಾಜ್ಞಾ ವರ್ಧತಾಂ
ಅಭಿವರ್ಧತಾಂ
ರಾಮಾನುಜಾರ್ಯದಿವ್ಯಾಜ್ಞಾ ಪ್ರತಿ
ವಾಸರಮುಜ್ವಲ
ದಿಗಂತವ್ಯಾಪಿನೀ ಭೂಯಾತ್ ಸಾಹಿಲೋಕ
ಹಿತೇಕ್ಷಣೆ.

★

## ಗೃಹಲಕ್ಷ್ಮಿ

# ಶಚೀದೇವಿ

ಚತುರ್ಮುಖನ ಹಗಲಿನ ಸಮಯದಲ್ಲಿ ಹನ್ನೊಂದು ಇಂದ್ರರು ಮೂಡು ವರು. ಇಂದ್ರ ಎನ್ನುವುದು ಅಧಿಕಾರದ ಹೆಸರೇ ಹೊರತು ವ್ಯಕ್ತಿಯ ಹೆಸರಲ್ಲ. ಇವ ರಲ್ಲಿ ಏಳನೆಯವನಾದ ಪುರಂಧರನೆಂಬುವನು ಈಗ ಇಂದ್ರನಾಗಿದ್ದಾನೆ. ಇವನ ಪತ್ನಿಯೇ ಶಚೀದೇವಿ.

ಶಚೀದೇವಿಯನ್ನು ಭಗವತಿ ಆದಿಶಕ್ತಿಯ ಹಿಂದು ಅಂಶವೆಂದು ನಂಬಲಾಗಿದೆ. ಈಕೆ ಸ್ವಯಂವರದ ಅಧಿಷ್ಠಾತ್ರಿ ದೇವಿಯಾ ಗಿದ್ದಾಳೆ. ಪುರಾತನ ಕಾಲದಲ್ಲಿ ಎಲ್ಲಿಯೇ ಸ್ವಯಂವರವಾದರೂ ಮೊದಲು ಶಚೀದೇವಿ ಯನ್ನು ಆವಾಹನೆ ಮಾಡಿ, ವಿಧಿವತ್ತಾಗಿ ಪೂಜಿಸಲಾಗುತ್ತಿತ್ತು. ಇದರಿಂದ ಸ್ವಯಂವರ ಸಭೆಯಲ್ಲಿ ಯಾವುದೇ ರೀತಿಯ ವಿಘ್ನವೂ ಆಗದಿರಲಿ ಮತ್ತು ಉತ್ಪಾತ, ಕಲಹ ಹಾಗೂ ಯುದ್ಧ ಕೋಲಿಗಳು ಆಗದಿರಲಿ ಎಂದು ಆಶಿಸುತ್ತಿದ್ದರು.

ಋಗ್ವೇದದಲ್ಲಿ ಶಚಿಯನ್ನು ಕುರಿತಾದ ಸೂಕ್ತಗಳು ಬಹಳಿವೆ. ಈ ಮಂತ್ರಗಳು ಪತ್ನಿಯನ್ನು ತನ್ನ ಹತೋಟಿಯಲ್ಲಿಟ್ಟು ಕೊಳ್ಳಲು ಪ್ರತಿಯೊಬ್ಬಗಂಡಸಿಗೂ ಅನುಷ್ಠಾನ ಯೋಗ್ಯವಾದುದು ಎಂದು ನಂಬಲಾಗಿದೆ.

ಶಚೀದೇವಿಯು ಪತಿವ್ರತಾಸ್ತ್ರೀಯರಲ್ಲಿನ ಶ್ರೇಷ್ಠತಮ ಹೆಣ್ಣು ಎಂದು ನಂಬಲಾಗಿದೆ. ಭೋಗ–ವಿಲಾಸಗಳಿಂದ ಕೂಡಿದ ಸ್ವರ್ಗ ದಲ್ಲಿ ಮಹಾರಾಣಿಯಂತಿದ್ದರೂ ಸತೀತ್ವದ ಪ್ರತೀಕದಂತಿದ್ದಳು. ಪತಿಯಾದ ಇಂದ್ರನ ವಿಲಾಸಮಯ ಜೀವನವು ಅವಳ ಮೇಲೆ ಯಾವ ಪ್ರಭಾವವೂ ಬೀರಲಿಲ್ಲ. ಇಂತಹ ಸಾಧ್ವೀಮಣಿಯು ಇತರರನ್ನು ಪುಣ್ಯಪಥ ದಲ್ಲಿ ಕರೆದೊಯ್ಯುವುದರಲ್ಲಿ ಅಗ್ರೇಸರಳಾ ಗಿರುತ್ತಿದ್ದಳು. ದೇವರಾಜ ಇಂದ್ರನೆ ಅವಳ ಸರ್ವಸ್ವವಾಗಿದ್ದನು. ಇಂದ್ರನ ವಿನಹ ಬೇರೊಬ್ಬ ಪುರುಷನನ್ನು ಅವಳು ಕಣ್ಣೆತ್ತಿಯೂ ನೋಡಲಿಲ್ಲ. ಪತಿವ್ರತಾ ಧರ್ಮವನ್ನು ಅಕ್ಷರಶಃ ಪಾಲಿಸುತ್ತಿದ್ದಳು.

ಯಾವುದೇ ಸ್ಥಾನದಲ್ಲಿದ್ದರೂ ವಜ್ರವು ವಜ್ರವೇ ಅಲ್ಲವೆ? ಅಂತೆಯೇ ಶಚೀದೇವಿಯೂ ಕೂಡ. ದಾನವರಲ್ಲಿ ಜನಿಸಿದರೂ ಕೂಡ ತನ್ನ ತ್ಯಾಗಬುದ್ಧಿ, ತಪಸ್ಸು ಮತ್ತು ಸಂಯಮ ಇತ್ಯಾದಿ ಸದ್ಗುಣಗಳನ್ನು ಹೊಂದಿದ್ದುದರಿಂದ ಶಚಿಯು ದೇವತೆ ಗಳಿಂದಲೂ ಪೂಜನೀಯಳಾದಳು.

ಶಚಿಯ ತಂದೆಯ ಹೆಸರು ಪುಲೋಮ. ದಾನವ ಕುಲದಲ್ಲಿ ಎಲ್ಲರಿಂದಲೂ ಸನ್ಮಾನಿತ ನಾದ ವೀರನಾಗಿದ್ದನು. ಈತನ ಮುಖಾಂತರ ಶಚಿಯ ಹೆಸರು ಪೌಲೋಮಿ ಅಥವಾ ಪುಲೋಮಜಾ ಎಂದಾಯಿತು.

ಬಾಲ್ಯದಲ್ಲಿ ಶಚಿಯು ಶಂಕರ ಭಗವಾನ ನನ್ನು ಕುರಿತು ತಪಸ್ಸು ಮಾಡಿದಳು. ಆದ ರಿಂದ ಸಂಪ್ರೀತನಾದ ಶಂಕರನು ವರ ನೀಡಿ ದುದರ ಪರಿಣಾಮವಾಗಿ ಇಂದ್ರನ ಪ್ರಿಯತಮ ಪತ್ನಿಯಾಗಿ, ಸ್ವರ್ಗಲೋಕದ ರಾಣಿಯಾದಳು. ಶಚಿಯ ಜೀವನವು ಈ ರೀತಿಯಲ್ಲಿ ಸುಖಮಯವಾಗಿ ಮುಂದು ವರಿಯತೊಡಗಿತು.

ಈ ರೀತಿಯಲ್ಲಿ ಅನೇಕ ಯುಗಗಳು ಉರುಳಿ ಹೋದವು. ಆದರೆ ಇದ್ದಕ್ಕಿದ್ದಂತೆ ಶಚಿಯ ಜೀವನದಲ್ಲಿ ಅಗ್ನಿಪರೀಕ್ಷೆ ಯಂತಹ ಸನ್ನಿವೇಶ ಒದಗಿ ಬಂದಿತು. ಎಂತಹ ವ್ಯಕ್ತಿಯೇ ಆಗಲಿ ಈ ರೀತಿಯ ದುಃಖಮಯ ಸನ್ನಿವೇಶ ಒದಗಿಬಂದಾಗಲೇ ಭಗವಂತನ ನಾಮಸ್ಮರಣೆ ಮಾಡುವನು, ತನ್ನಲ್ಲಿನ ತಪ್ಪುಗಳನ್ನು ತಿದ್ದಿಕೊಳ್ಳಲು ಪ್ರಯತ್ನಿಸಿ, ಆದರ ಮುಖಾಂತರ ಸದ್ಧರ್ಮದ ಮಹತ್ವ ವನ್ನು ತಿಳಿಯುವನು. ಅಂತೆಯೆ ಶಚೀ ದೇವಿಯು ಧೈರ್ಯ, ಸಾಹಸಗಳಿಂದ ಆ ಸನ್ನಿವೇಶವನ್ನು ಎದುರಿಸಿ, ತನ್ನ ಸತೀತ್ವ



ವನ್ನು ರಕ್ಷಿಸಿಕೊಳ್ಳುವುದರಲ್ಲಿ ಸಫಲ ಳಾದಳು.

ಇಂದ್ರನು ತನ್ನನ್ನು ಕೊಲ್ಲುವುದಕ್ಕಾಗಿ ಸೃಷ್ಟಿಯಾದ ತ್ವಷ್ಟೃವಿನ ಮಗನಾದ ವೃತ್ರಾ ಸುರನನ್ನು ಯುದ್ಧದಲ್ಲಿ ವಧಿಸಿದನು. ಇದ ರಿಂದ ಅವನ ಮೇಲೆ ಬ್ರಹ್ಮಹತ್ಯಾದೋಷ ಆಕ್ರಮಿಸಿತು. ಆದರಿಂದ ತಪ್ಪಿಸಿಕೊಳ್ಳಲು ಮಾನಸ ಸರೋವರದ ನೀರಿನಲ್ಲಿ ಬಚ್ಚಿಟ್ಟು ಕೊಂಡನು. ಸ್ವರ್ಗದಲ್ಲಿ ಇಂದ್ರನಿಲ್ಲ ದಂತಾಯಿತು. ಇದರಿಂದ ಮೂರು ಲೋಕ ಗಳಲ್ಲಿಯೂ ಅರಾಜಕತೆ ಹರಡಿತು. ಅನೇಕ ರೀತಿಯ ಉತ್ಪಾತಗಳುಂಟಾದುವು. ಮಳೆಯು ನಿಂತುಹೋಯಿತು. ನದಿಗಳು ಒಣಗಿಹೋದವು. ಧನ ಹಾಗೂ ವೈಭವ ಗಳಿಲ್ಲದ ಭೂಮಿಯು ಉಂಟಾಯಿತು.

ಆಗ ದೇವತೆಗಳೆಲ್ಲರೂ ಬ್ರಹ್ಮನ ಬಳಿಗೆ ಹೋಗಿ ಸಮಸ್ಯೆಯನ್ನು ತಿಳಿಸಿದರು. ಚತುರ್ಮುಖನು ಭೂಲೋಕದಲ್ಲಿರುವ ನಹುಷ ಚಕ್ರವರ್ತಿಯನ್ನು ಕರೆದು ತಂದು ಇಂದ್ರಪದವಿಯಲ್ಲಿರುವಂತೆ ತಿಳಿಸಿದ. ನಹುಷನನ್ನು ಹೋಗಿ ಕೇಳಲು ಮೊದಲು ಒಪ್ಪದ ಅವನು ನಂತರ ಸಮ್ಮತಿಸಿದನು. ಆದರೆ ದೇವಲೋಕಾಧಿಪತ್ಯವನ್ನು ಪಡೆದ ಮೇಲೆ ರಾಜಮದದ ಪ್ರಭಾವದಿಂದ ಮುಕ್ತ ನಾಗಲಿಲ್ಲ. ವಿಷಯ ಭೋಗಗಳಲ್ಲಿ ಆಸಕ್ತ ನಾದ. ಅವನು ಶಚೀದೇವಿಯ ರೂಪ ಲಾವಣ್ಯಗಳನ್ನು ಕೇಳಿದ್ದುದರಿಂದ, ಅವಳನ್ನು ಕೂಡಬೇಕೆಂಬ ದುರಭಿಲಾಷೆಯು ಅವನಲ್ಲಿ ಉದಯಿಸಿತು. ಇದರ ಸೂಕ್ಷ್ಮವನ್ನರಿತ

'ರಘುಸುತ'

ಶಚಿಯು ದೇವತೆಗಳ ಗುರುವಾದ ಬೃಹಸ್ಪತಿಯ ಆಶ್ರಯವನ್ನು ಪಡೆದಳು. ಆತನು ಅವಳಿಗೆ ಧೈರ್ಯದಿಂದ ಇರುವಂತೆ ಆಶ್ವಾಸನೆ ನೀಡಿದ.

ಇಂದ್ರಾಣಿಯು ಬೃಹಸ್ಪತಿಯ ಶರಣ್ಯದಲ್ಲಿದ್ದಾಳೆ ಎಂಬುದನ್ನು ತಿಳಿದ ಕೂಡಲೆ ನಹುಷನು ಕೋಪಗೊಂಡು ತನಗೆ ವ್ಯತಿರೇಕವಾಗಿ ನಡೆದದ್ದೇ ಆದರೆ ಆತನನ್ನು ಕೊಲ್ಲುವುದಾಗಿ ಹೆದರಿಸಿದ. ಆಗ ದೇವತೆಗಳು ನಹುಷನನ್ನು ಸಮಾಧಾನಗೊಳಿಸಿ,

"ಪ್ರಭು! ತಮ್ಮ ಕೋಪವನ್ನು ಶಾಂತಗೊಳಿಸಿಕೊಳ್ಳಿ. ಪರಸ್ತ್ರೀ ವ್ಯಾಮೋಹವನ್ನು ಧರ್ಮ ಶಾಸ್ತ್ರಗಳು ನಿಷೇಧಿಸಿವೆ. ಇಂದ್ರಾಣಿಯು ಸಾಧ್ವೀಜೀವನವನ್ನು ನಡೆಸುವವಳಾಗಿದ್ದಾಳೆ. ತಮ್ಮಂತಹ ಮೂರು ಲೋಕಗಳ ನಾಥನು, ಧರ್ಮದ ಉಪದೇಶಕನು, ಮಹಾಪುರುಷನು ಈ ರೀತಿಯಲ್ಲಿ ಅಧರ್ಮದ ಆಚರಣೆಯಲ್ಲಿ ನಿರತನಾದದ್ದೇ ಆದರೆ ಪ್ರಜೆಗಳ ನಾಶ ಖಂಡಿತ. ಪುಣ್ಯಬಲದಿಂದ ಇಂದ್ರಪದವಿಯನ್ನು ಪಡೆದಿರುವ ತಾವು ಈ ರೀತಿಯಲ್ಲಿ ಯೋಚಿಸುವುದು ತಪ್ಪು. ಆದುದರಿಂದ ಈ ಪಾಪಬುದ್ಧಿಯನ್ನು ಬಿಟ್ಟುಬಿಡಿ"–ಎಂದರು.

ಆದರೆ ಕಾಮಾಂಧ ನಹುಷನ ಮೇಲೆ ಈ ಉಪದೇಶವು ಯಾವ ಪರಿಣಾಮವನ್ನೂ ಬೀರಲಿಲ್ಲ. ಆದುದರಿಂದ ದೇವತೆಗಳು ಹಾಗೂ ಮಹರ್ಷಿಗಳು ತುಂಬಾ ಭಯಪಟ್ಟರು. ಹೇಗಾದರೂ ಶಚೀದೇವಿಯನ್ನು ಒಪ್ಪಿಸಿ ಅವನ ಬಳಿಗೆ ಕಳುಹಿಸುವುದಾಗಿ ತಿಳಿಸಿದರು.

ಅಂತೆಯೇ ಶಚಿಯು ನಹುಷನ ಎದುರಿಗೆ ಹೋಗಲು ಒಪ್ಪದೆ ಹೀಗೆಂದು ಹೇಳಿ ಕಳುಹಿಸಿದಳು, "ದೇವೇಶ್ವರನೆ! ಇಂದ್ರನು ಬದುಕಿರುವನೆ, ಇಲ್ಲವೆ ಎಂಬುದನ್ನು ನಿರ್ಧರಿಸಿಕೊಂಡು ನಂತರ ನಿಮ್ಮ ಸೇವೆಗೆ ನಿಲ್ಲುವೆನು. ಅದುವರೆವಿಗೂ ನನಗೆ ಕಾಲಾವಕಾಶ ಕೊಡಿ". ನಹುಷನು ಇದಕ್ಕೆ ಒಪ್ಪಿದ.

ದೇವತೆಗಳು ಪರಮಾತ್ಮನನ್ನು ಪ್ರಾರ್ಥಿಸಿದ್ದರಿಂದ ಇಂದ್ರನು ಮಾನಸ ಸರೋವರದಲ್ಲಿರುವುದಾಗಿಯೂ, ಅವನಿಂದ ಅಶ್ವಮೇಧ ಯಜ್ಞವನ್ನು ಮಾಡಿಸಿ, ಜಗದಂಬೆಯ ಪೂಜೆಯನ್ನು ಮಾಡಿದಲ್ಲಿ ಅವನು ಎಲ್ಲ ಪಾಪಗಳಿಂದ ಮುಕ್ತನಾಗುವುದಾಗಿಯೂ ಪರಮಾತ್ಮನು ತಿಳಿಸಿದ.

ಇದರಂತೆ ದೇವತೆಗಳು ಮಾನಸ ಸರೋವರವನ್ನು ತಲುಪಿ, ಇಂದ್ರನಿಂದ ಅಶ್ವಮೇಧ ಯಜ್ಞವನ್ನು ಮಾಡಿಸಿದರು.

ಜಗದಂಬೆಯ ಪೂಜೆಯನ್ನು ಮಾಡಿದ ಇಂದ್ರನು ತನ್ನಲ್ಲಿನ ಬ್ರಹ್ಮಹತ್ಯಾದೋಷವನ್ನು ವೃಕ್ಷ, ನದಿ, ಪರ್ವತ, ಸ್ತ್ರೀ ಹಾಗೂ ಪೃಥ್ವಿಗಳಿಗೆ ಹಂಚಿದನು.

ಇದೇ ರೀತಿಯಲ್ಲಿ ಶಚೀದೇವಿಯು ಮಂತ್ರ ಸಹಿತ ದೀಕ್ಷೆಯನ್ನು ತೆಗೆದುಕೊಂಡು ಭುವನೇಶ್ವರಿಯ ಆರಾಧನೆ ಮಾಡಿದಳು. ಸಕಲ ಭೋಗಗಳನ್ನೂ ತ್ಯಜಿಸಿ, ತಪಸ್ವಿನಿಯಾದಳು. ಕೆಲವು ಕಾಲದ ನಂತರ ಸಂತುಷ್ಟಳಾದ ಭಗವತಿಯು ಪ್ರತ್ಯಕ್ಷಳಾಗಿ ಏನು ವರ ಬೇಕೆಂದು ಕೇಳಿದಳು.

"ಮಹಾಮಾತೆ! ನನಗೆ ಪತಿ ದೇವನ ದರ್ಶನ ಭಾಗ್ಯ ನೀಡು. ಅಂತೆಯೇ ನಹುಷನು ನನಗೆ ಯಾವ ರೀತಿಯ ಭಯವನ್ನೂ ಉಂಟುಮಾಡದಿರಲಿ!"

ದೇವಿಯು ತಥಾಸ್ತು ಎಂದು ಆಶೀರ್ವದಿಸಿ, ಓರ್ವ ದೂತಿಯನ್ನು ನೀಡಿ, ಮಾನಸ ಸರೋವರದ ಕಡೆಗೆ ಶಚೀದೇವಿಯನ್ನು ಕಳುಹಿಸಿದಳು.

ಪತಿಯನ್ನು ನೋಡಿದ ಕೂಡಲೆ ಶಚೀದೇವಿಗೆ ತುಂಬಾ ಸಂತೋಷವಾಯಿತು. ಅವಳಿಗೆ ನೂತನ ಪ್ರಾಣ ಲಭಿಸಿದಂತಾಯಿತು. ನಹುಷನ ಪಾಪ ವಾಸನೆಯಿಂದ ತನ್ನ ಮೇಲೆ ಒದಗಿ ಬಂದಿರುವ ಸಂಕಟವನ್ನು ತಿಳಿಸಿದಳು. "ಪತಿವ್ರತಾ ಧರ್ಮದಿಂದ ನೀನು ಸದಾ ರಕ್ಷಿಸಲ್ಪಡುತ್ತಿರುವೆ, ಭಯಪಡದಿರು. ಇತರರ ಶಕ್ತಿಯ ಆಧಾರದ ಮೇಲೆ ಸತೀತ್ವದ ರಕ್ಷಣೆ ಮಾಡಿಕೊಳ್ಳುವವರು ಉತ್ತಮ ಶ್ರೇಣಿಯ ಪತಿವ್ರತೆಯರಲ್ಲ...... ನೀನು ಭಗವತಿಯ ಉಪಾಸನೆ ಮಾಡಿದಲ್ಲಿ, ನಿನ್ನ ರಕ್ಷಣೆಯಾಗುವುದು ಖಂಡಿತ!" ಎಂದು ಇಂದ್ರನು ಪತ್ನಿಯನ್ನು ಸಮಾಧಾನಗೊಳಿಸಿದ.

ಶಚೀದೇವಿಗೆ ಇದರಿಂದ ಎಷ್ಟೋ ತೃಪ್ತಿ ದೊರೆಯಿತು. ಸ್ವರ್ಗಲೋಕಕ್ಕೆ ಹಿಂತಿರುಗಿ ದೇವಿಯ ಉಪಾಸನೆಯಲ್ಲಿ ನಿರತಳಾದಳು.

ಶಚೀದೇವಿಯು ಹಿಂತಿರುಗಿ ಬಂದುದನ್ನು ತಿಳಿದು ನಹುಷನು ಮತ್ತೆ ಹೇಳಿ ಕಳುಹಿಸಿದ. ಆಗ ಶಚಿಯು ಯೋಚಿಸಿ, "ರಾಜನ್! ನನ್ನ ಮನಸದಭಿಲಾಷೆಯೆಂದರೆ, ಇದುವರೆವಿಗೂ ಕಾಣದಂತಹ ಅಪೂರ್ವವಾಹನದಲ್ಲಿ ನಾನು ನಿನ್ನ ವಶವರ್ತಿನಿಯಾಗುವೆನು!" ಎಂದು ಹೇಳಿ ಕಳುಹಿಸಿದಳು.

ತನ್ನ ಶಕ್ತಿಯು ಯಾರಿಗೂ ಕಡಿಮೆ ಇಲ್ಲವೆಂಬುದನ್ನು ತೋರಿಸಿಕೊಳ್ಳಲು ಸಪ್ತರ್ಷಿಗಳನ್ನು ವಾಹನದನ್ನಾಗಿ ಮಾಡಿಕೊಂಡು ತಾನು ಪಲ್ಲಕ್ಕಿಯಲ್ಲಿ ಕುಳಿತು ಶಚಿಯ ಮನೆಗೆ ಹೊರಟನು. ಆ ಸಪ್ತರ್ಷಿಗಳಲ್ಲಿ ಅಗಸ್ತ್ಯರೂ ಒಬ್ಬರು. ಅವರು ನಿಧಾನವಾಗಿ ಹೋಗುತ್ತಿದ್ದುದರಿಂದ, ಮದಾಂಧನಾದ ನಹುಷನು ಮರ್ಯಾದೆಯನ್ನು ಅತಿಕ್ರಮಿಸಿ, ಶಚಿಯ ಮನೆಗೆ ಬೇಗ ಹೋಗಬೇಕೆಂಬ ಆತುರದಿಂದ ಅವರನ್ನು ಕುರಿತು "ಸರ್ಪ, ಸರ್ಪ!" (ಬೇಗ ನಡೆ, ಬೇಗ ನಡೆ!) ಎಂದು ಹೇಳುತ್ತ ಅಗಸ್ತ್ಯರ ತಲೆಯನ್ನು ಕಾಲಿನಿಂದ ಒದ್ದನು. ಆದರೆ ಕ್ಷಮಾಶೀಲರಾದ ಅಗಸ್ತ್ಯರು. ಕ್ರುದ್ಧರಾಗಿ 'ಸರ್ಪೋ ಭವ!' ಎಂದು ಶಪಿಸಿದರು. ಕೂಡಲೆ ಅವನು ಸರ್ಪವಾಗಿ ಭೂಮಿಯ ಮೇಲೆ ಬಿದ್ದ. ಮುಂದೆ ಅನೇಕ ಯುಗಗಳ ನಂತರ ಪಾಂಡವರಿಂದ ತನ್ನ ಶಾಪವಿಮೋಚನೆಯನ್ನು ಪಡೆದ.

ಈ ರೀತಿಯ ಶಚಿಯು ಉಪಾಯವಾಗಿ ತನ್ನ ಮೇಲೆ ಎರಗಿ ಬಂದಿದ್ದ ಧಾಳಿಯನ್ನು ತಪ್ಪಿಸಿಕೊಂಡು, ತನ್ನ ಪಾತಿವ್ರತ್ಯವನ್ನೂ ಕಾಪಾಡಿಕೊಂಡಳು. ಇಷ್ಟರಲ್ಲಿ ವಿಷ್ಣುವಿನ ಸೂಚನೆಯ ಮೇರೆಗೆ ಅಶ್ವಮೇಧವನ್ನು ಮಾಡಿ ಬ್ರಹ್ಮಹತ್ಯಾ ಪಾಪವನ್ನು ಹೋಗಲಾಡಿಸಿಕೊಂಡ ಇಂದ್ರನು ಹಿಂತಿರುಗಿ ಬಂದು ದೇವರಾಜ ಪಟ್ಟವನ್ನು ಸ್ವೀಕರಿಸಿದ.

ಈ ರೀತಿಯಲ್ಲಿ ಪತಿವ್ರತಾ ಸ್ತ್ರೀಯರಿಗೆ ಆದರ್ಶಪ್ರಾಯಳಾದ ಶಚಿಯು ಆಪತ್ತು ಬಂದಾಗ ಯಾವ ರೀತಿ ಉಪಾಯದಿಂದ ಅದನ್ನು ನಿವಾರಿಸಿಕೊಳ್ಳಬೇಕು, ತಮ್ಮ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಬೇಕು ಎಂಬುದನ್ನು ಈ ಉದಾಹರಣೆಯ ಮುಖಾಂತರ ಮುಂದಿನ ಯುಗಗಳ ಜನರಿಗೆ ತೋರಿಸಿಕೊಟ್ಟಿದ್ದಾಳೆ. ಇಂತಹ ಪತ್ನಿಯನ್ನು ಪಡೆದುದಕ್ಕೆ ಇಂದ್ರನೂ ತನ್ನನ್ನು ತಾನು ಧನ್ಯನೆಂದುಕೊಂಡಿದ್ದ. ಮುಂದೆ ಇಂದ್ರನು ಎಷ್ಟು ಉತ್ತಮನಾದನೆಂದರೆ ಒಂದು ಸಂದರ್ಭದಲ್ಲಿ ಪಾತಿವ್ರತ್ಯ ಮಹಾತ್ಮೆಯ ವಿಚಾರದಲ್ಲಿ ಅಗ್ನಿಯೊಂದಿಗೆ ಸಂವಾದ ಮಾಡಿದನೆಂಬುದನ್ನು ವಿವರಿಸುವ ಪ್ರಸಂಗವು ಮಹಾಭಾರತದಲ್ಲಿ ಕಂಡು ಬರುತ್ತದೆ. ಶಚೀದೇವಿಯ ಗುಣಗಳ ಪ್ರಭಾವದಿಂದ ಉತ್ತಮಗೊಂಡ ಇಂದ್ರನು ತದನಂತರದಲ್ಲಿ ಕೆಲವೊಂದು ಮಂತ್ರಗಳ ಅಧಿದೇವತೆಯಾದನೆಂಬುದನ್ನು ಋಗ್ವೇದದಲ್ಲಿರುವ ಮಂತ್ರಗಳ ಮುಖಾಂತರ ತಿಳಿದುಕೊಳ್ಳಬಹುದು. ತನ್ನ ಅರಿವಿಗೆ ಬಂದಿದ್ದ ಸತ್ಸಂಬಂಧ ವಿಷಯಗಳನ್ನು ಶಚೀದೇವಿಯು ಜಗತ್ತಿಗೆ ತಿಳಿಯಪಡಿಸಲು ಪ್ರಯತ್ನಿಸುತ್ತಿದ್ದಳು. ಇಂತಹ ಒಂದು ಉದಾಹರಣೆಯನ್ನು ಮಹಾಭಾರತದಲ್ಲಿ ಕಾಣಬಹುದು. ಅಲ್ಲಿ, ಸೂರ್ಯನೊಂದಿಗೆ ಸಂವಾದ ಮಾಡುತ್ತಾ ಶಚೀದೇವಿಯು ಪತಿವ್ರತಾ ಸ್ತ್ರೀಯರ ಮಾಹಾತ್ಮ್ಯವನ್ನು ಸುಲಲಿತವಾಗಿ ವಿವರಿಸಿದ್ದಾಳೆ.

(ಆಧಾರಗಳಿಂದ)

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ 'ಬ್ಯಾಂಕ್ ಡ್ರಾಫ್ಟ್' ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಟಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ವಾರ್ತಾಲಹರಿ

## ತಿರುಮಲೆಯಲ್ಲಿ ಶ್ರೀ ರಾಮಕೃಷ್ಣ ಹೆಗಡೆ

ಕರ್ನಾಟಕದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರು ತಮ್ಮ ಸತೀಮಣಿ ಶ್ರೀಮತಿ ಶಕುಂತಲಾಹೆಗಡೆ ಅವರೊಂದಿಗೆ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ದರ್ಶಿಸಿ ಆರಾಧಿಸಿದರು.

ಬೆನ್ನು ನೋವಿನಿಂದ ನೋಯುತ್ತಿರುವ ಮುಖ್ಯಮಂತ್ರಿಯವರು ತಮಗಾಗಿ ಪ್ರತ್ಯೇಕರೀತಿಯಲ್ಲಿ ವ್ಯವಸ್ಥೆ ಮಾಡಿದ ಆಸನದ ಕಾರಿನಲ್ಲಿ ಬೆಂಗಳೂರಿನಿಂದ ತಿರುಮಲೆಗೆ ಬಂದರು. ತಿರುಮಲೆಯಲ್ಲಿ ಆಲಯ ಅಧಿಕಾರಿಗಳಿಂದ ಸ್ವಾಗತಿಸಲ್ಪಟ್ಟ ಹೆಗಡೆ ದಂಪತಿಗಳಿಗೆ ಕನ್ನಡ ಬಲ್ಲ ಅರ್ಚಕರಿಂದ ಆಲಯದ ಐತಿಹ್ಯವನ್ನೂ ಪುರಾಣ ಇತಿಹಾಸಗಳನ್ನೂ ತಿಳಿಸಲಾಯಿತು. ಅವರು ದೇವಾಲಯಕ್ಕೆ ಆಗಮಿಸಿದಾಗ ಸ್ವಾಮಿಗೆ ಹಳೆಯ ಕಿರೀಟದ ಅಲಂಕರಣವಿದ್ದದ್ದರಿಂದ ಹೊಸ ಕಿರೀಟವನ್ನು ಪ್ರತ್ಯೇಕವಾಗಿ ತೋರಿಸಲಾಯಿತು. ಶ್ರೀ ಹೆಗಡೆಯವರನ್ನು ಸ್ವಾಮಿಯ ಶೇಷವಸ್ತ್ರದಿಂದ ಸನ್ಮಾನಿಸಲಾಯಿತು. ಪಥ್ಯದಲ್ಲಿದ್ದ ಹೆಗಡೆಯವರು ತೀರ್ಥವನ್ನು ಮಾತ್ರ ಸ್ವೀಕರಿಸಿ, ನಿಂತುಕೊಂಡೇ ಆಶೀರ್ವಾದವನ್ನು ಪಡೆದರು.

## ತಿರುಮಲೆಯಲ್ಲಿ ಎನ್. ಎಸ್. ಎಸ್. ವಿದ್ಯಾರ್ಥಿನಿಯರ ಸೇವೆ

ಆಂಧ್ರಪ್ರದೇಶ ಹಾಗೂ ತಮಿಳುನಾಡುಗಳ ವಿವಿಧ ವಿಶ್ವವಿದ್ಯಾಲಯಗಳ ಸುಮಾರು ಮುನ್ನೂರು ಮಂದಿ ಎನ್. ಎಸ್. ಎಸ್. ವಿದ್ಯಾರ್ಥಿನಿಯರು ತಿರುಮಲೆಯಲ್ಲಿ ಎಂಟುದಿನಗಳ ಸೇವಾ ಶಿಬಿರದಲ್ಲಿ ಪಾಲ್ಗೊಂಡು ತಮ್ಮ ಸೇವಾ ತತ್ಪರತೆಯಿಂದ ಶ್ಲಾಘನೆ ಹೊಂದಿದರು.

ಈ ಸ್ವಯಂ ಸೇವಕಿಯರು ತಿ. ತಿ. ದೇ. ಗಳ ಅರಣ್ಯಾಭಿವೃದ್ಧಿ ಹಾಗೂ ಉಪವನ ವಿಭಾಗದ ನರ್ಸರಿಗಳಲ್ಲಿ ಬೆಳೆಸಲು ಒಂದು ಲಕ್ಷ ಸಸಿಗಳನ್ನು ಪಾಲಿಥಿನ್ ಚೀಲಗಳಲ್ಲಿ ತುಂಬಿದರು ಹಾಗೂ ಇಪ್ಪತ್ತು ಎಕರೆಯ ಪ್ರದೇಶದಲ್ಲಿ ಕೆಂಪು ಮಣ್ಣನ್ನು ಹರಡಿ, ಹುಲ್ಲುಹಾಸನ್ನು ತಯಾರಿಸಿದರು.

ತಿ. ತಿ. ದೇ. ಗಳ ಅಶ್ವಿನಿ ಆಸ್ಪತ್ರೆಯಲ್ಲಿನ ರಕ್ತನಿಧಿಗೆ 43 ಮಂದಿ ರಕ್ತದಾನ ಮಾಡಿದರು. ರಕ್ತದಾನದ ಉಪಯೋಗಗಳನ್ನು ಕುರಿತು ಜನಕ್ಕೆ ಶಿಕ್ಷಣ ನೀಡುವ ಉದ್ದೇಶದಿಂದ ಆಸ್ಪತ್ರೆಯಲ್ಲಿ ಒಂದು ವಸ್ತುಪ್ರದರ್ಶನವನ್ನು ಏರ್ಪಡಿಸಲಾಗಿದ್ದಿತು.

ಎಸ್. ವಿ. ವಿಶ್ವವಿದ್ಯಾಲಯದ ಎನ್. ಎಸ್. ಎಸ್. ಕಾರ್ಯಸಂಯೋಜಕರಾದ ಎಂ. ಡಿ. ನಾರಾಯಣ ನಾಯುಡು ಅವರು ಶಿಬಿರದ ಸಮಾರೋಪಸಭೆಯಲ್ಲಿ ಶಿಬಿರದ ಯಶಸ್ಸಿಗೆ ತಿ. ತಿ. ದೇ. ಗಳ ಸಹಕಾರವೇ ಕಾರಣವೆಂದು ತಿಳಿಸಿದರು.

ತಿ. ತಿ. ದೇ. ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ಹಾಗೂ ಇತರ ಎನ್. ಎಸ್. ಎಸ್. ಅಧಿಕಾರಿಗಳೂ ಮಾತನಾಡಿದರು. ಮಹಿಳಾ ವಿಶ್ವವಿದ್ಯಾಲಯದ ಉಪಕುಲಪತಿ ಶ್ರೀಮತಿ ವನಜಾ ಅಯ್ಯಂಗಾರ್ ಅವರ ಅಧ್ಯಕ್ಷತೆಯಲ್ಲಿ ಆಂಧ್ರಪ್ರದೇಶದ ಅರಣ್ಯಶಾಖಾ ಸಚಿವ ಶ್ರೀ ಮಹಿಪಾಲರೆಡ್ಡಿ ಅವರು ಸಮಾರೋಪ ಭಾಷಣ ಮಾಡಿದರು. ಶ್ರೀಮತಿ ನಿರ್ಮಲಕೃಷ್ಣ ಅವರು ಸಭೆಯನ್ನು ವಂದಿಸಿದರು.

## ಜನಪ್ರಿಯವಾಗುತ್ತಿರುವ ಅನ್ನದಾನಯೋಜನೆ

ತಿರುಮಲೆಯ ಯಾತ್ರಿಕರಿಗೆ ಉಚಿತ ಭೋಜನ ನೀಡುವ ಉದ್ದೇಶದ ಶ್ರೀ. ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ದಾನಿಗಳಲ್ಲೂ, ಭಕ್ತರಲ್ಲೂ ಜನಪ್ರಿಯವಾಗುತ್ತಿದೆ.

ಇಂಡಿಯನ್ ಎಕ್ಸ್‌ಪ್ರೆಸ್ ಸಮೂಹದ ವಾರ್ತಾಪತ್ರಿಕೆಗಳ ಅಧ್ಯಕ್ಷ ಶ್ರೀ ರಾಮನಾಥ ಗೋಯಂಕ ಅವರು ಈ ಯೋಜನೆಗಾಗಿ ಕಳುಹಿಸಿದ 10 ಲಕ್ಷ ರೂಗಳ ವಂತಿಗೆಯಿಂದ ಒಟ್ಟು ಸಾರ್ವಜನಿಕ ವಂತಿಗೆ 1 ಕೋಟಿ ರೂಗಳಾದವು. ಇಂಡಿಯನ್ ಎಕ್ಸ್‌ಪ್ರೆಸ್‌ನ ವರದಿಗಾರ ಶ್ರೀ ತಾತಾರಾವ್ ಅವರು ಶ್ರೀ ರಾಮನಾಥ ಗೋಯಂಕ ಅವರ ಪರವಾಗಿ ಚೆಕ್ ಅನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರಿಗೆ ಆಗಸ್ಟ್ 11 ರಂದು ನೀಡಿದರು. ಶ್ರೀರಾಮನಾಥ ಗೋಯಂಕ ಅವರ ಪುತ್ರ ಶ್ರೀ ಬಿ. ಡಿ. ಗೋಯಂಕ ಅವರು ಎರಡು ವರ್ಷದ ಹಿಂದೆ ತಿ. ತಿ. ದೇ. ಬೋರ್ಡ್ ಸದಸ್ಯರಾಗಿದ್ದರು ಎಂಬುದನ್ನು ಇಲ್ಲಿ ನೆನೆಯಬಹುದು.

ಅನ್ನದಾನ ಯೋಜನೆಯಲ್ಲಿ ಯಾವ ವ್ಯಕ್ತಿ ಸಂಸ್ಥೆಯೇ ಆಗಲಿ ಹತ್ತು ಲಕ್ಷ ರೂಗಳನ್ನು ನೀಡಿದಲ್ಲಿ ಅದರಷ್ಟೇ ಮೊತ್ತವನ್ನು ತಿ. ತಿ. ದೇ. ಗಳ ಪತಿಯಿಂದ ತುಂಬಿಸಿ ಬ್ಯಾಂಕಿನಲ್ಲಿಟ್ಟು ಬರುವ ಬಡ್ಡಿಯಿಂದ ದಿನವೊಂದಕ್ಕೆ ಐದು ನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. 1985 ರಲ್ಲಿ ಏಪ್ರಿಲ್ 6 ರಂದು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರಿಂದ ಉದ್ಘಾಟಿತವಾಗಿ ಮೊದಲಿಗೆ ದಿನಂಪ್ರತಿ 2500 ಮಂದಿಗೆ ಉಚಿತ ಭೋಜನ ನೀಡಲಾಗುತ್ತಿದ್ದಿತು. ಜನ ತೋರಿಸಿದ ಉತ್ಸಾಹದಿಂದ ಎರಡನೆಯ ತಿಂಗಳಲ್ಲೇ ಈ ಸಂಖ್ಯೆಯನ್ನು 5000 ಮಂದಿಗೆ ಏರಿಸಲಾಯಿತು. ಈಗ ಹತ್ತುಸಾವಿರ ಮಂದಿಗೇರಿಸಲಾಗಿದೆ.

ಮೊದಲಿಗೆ ಮದರಾಸಿನ ಶ್ರೀ ಎಲ್. ವಿ. ರಾಮಯ್ಯ ಚಾರಿಟೀಸ್ ಹಾಗೂ ಬೊಂಬಾಯಿನ ಶ್ರೀ ಮಾನಸಿಂಗ್ ಶಾ ಅವರುಗಳು ಕ್ರಮವಾಗಿ 10 ಲಕ್ಷ ಹಾಗೂ 20 ಲಕ್ಷ ರೂಗಳನ್ನು ದಾನ ನೀಡಿದರು. ಪ್ರತಿಯಾಗಿ ತಿ. ತಿ. ದೇ. ತಾನೂ 30 ಲಕ್ಷ ರೂಗಳನ್ನು ಸೇರಿಸಿತ್ತು. ಹೀಗೆಯೇ ಮುಂದುವರೆದ ಯೋಜನೆ ಕಲ್ಕತ್ತೆಯ ಶ್ರೀ ಆರ್. ಪಿ. ಗೋಯಂಕ, ಹಾಗೂ ಶ್ರೀ ಈಶ್ವರಪ್ರಸಾದ್ ಪೋದ್ದಾರ್, ಬೊಂಬಾಯಿನ ಶ್ರೀ ನಾಥೂಭಾಯಿ ಅಂಬಾನಿ, ಕಲ್ಕತ್ತೆಯ ಶ್ರೀ ಬಿ. ಎಲ್ ಸೈತಾನ್, ಹಾಗೂ ಶ್ರೀ ಜಾಲನ್, ಹಾಗೂ ಬೊಂಬಾಯಿನ ಶ್ರೀ ಚಬ್ರಿಯಾ ಚಾರಿಟೀಸ್‌ನವರುಗಳಿಂದ ಹತ್ತು ಹತ್ತು ಲಕ್ಷ ರೂಗಳನ್ನು ಹೊಂದಿತು.

ಈ ಯೋಜನೆಯೂ, ನೀಡಲಾಗುತ್ತಿರುವ ಆಹಾರದ ಉತ್ಕೃಷ್ಟತೆಯೂ ಭಕ್ತರಿಂದ ಶ್ಲಾಘನೆಗೆ ಒಳಗಾಗಿದೆ. ತಿ. ತಿ. ದೇವಸ್ಥಾನಗಳು ತಿರುಮಲೆಗೆ ಬರುವ ಎಲ್ಲ ಯಾತ್ರಿಕರಿಗೂ ಉಚಿತ ಭೋಜನ ನೀಡುವ ದಿಸೆಯಲ್ಲಿ ವ್ಯಕ್ತಿ ಸಂಸ್ಥೆಗಳು ಹೆಚ್ಚು ಹೆಚ್ಚು ಮುಂದೆ ಬರಬೇಕೆಂದು ಮನವಿ ಮಾಡಿಕೊಂಡಿದೆ.

(39ನೇ ಪುಟ ನೋಡಿ)

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಪತಿಯ ಕಪಿಲತೀರ್ಥ ರಸ್ತೆಯ ತ್ಯಾಗರಾಜ ಆಲಯ ನಿರ್ಮಾಣ ಸಮಿತಿ ನಿರ್ಮಿಸುತ್ತಿರುವ ತ್ಯಾಗರಾಜ ಆಲಯಕ್ಕೆ ಹನ್ನೆರಡು ಸಾವಿರ ರೂಗಳ ವೆಚ್ಚದಲ್ಲಿ ಶ್ರೀ ತ್ಯಾಗರಾಜ ಸ್ವಾಮಿ ವಿಗ್ರಹವನ್ನು ತಯಾರಿಸಿ ಸಮರ್ಪಿಸಲು ತೀರ್ಮಾನಿಸಲಾಯಿತು.

* * * *

ಯಾತ್ರಿಕರ ವೈದ್ಯಕೀಯ ಚಿಕಿತ್ಸೆಗಳಿಗೆಂದು ತಿರುಪತಿಯ ಶ್ರೀ ವೆಂಕಟೇಶ್ವರ ರೂಯಾ ಆಸ್ಪತ್ರೆಯಲ್ಲಿ ಈಗಿರುವ 'ಬಿ' ವಾರ್ಡಿನ ಮೇಲೆ ಐದು ಕೊಟಡಿಗಳ ನಿರ್ಮಾಣಕ್ಕಾಗಿ ಎರಡು ಲಕ್ಷ ರೂಗಳ ವಂತಿಗೆಯನ್ನು ನೀಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯ ಗೋಗರ್ಭ ಆಣೆಕಟ್ಟೆಯ ಬಳಿ ಎರ್ಪೇಡಿನ ಶ್ರೀ ಮಳೆಯಾಳಸ್ವಾಮಿ ಮಠಕ್ಕೆ ತಪೋವನ ಸ್ಥಾಪನೆಗಾಗಿ ನಿಯಮ ನಿಬಂಧನೆಗಳ ಪ್ರಕಾರ ಸ್ಥಳ ನೀಡಲು ತೀರ್ಮಾನಿಸಿ, ಸರ್ಕಾರದ ಅನುಮತಿಯನ್ನು ಕೇಳಲು ತೀರ್ಮಾನಿಸಲಾಯಿತು.

* * * *

ಶ್ರೀ ನಾಗಭೂಷಣ ಅವರ ಪತ್ನಿ ಶ್ರೀಮತಿ ಚಾರುಗಂಡ್ಲ ನಾಗರತ್ನಮ್ಮ ಅವರು ತಿರುಮಲೆಯ ಸ್ವಾಮಿಗೆ ದಾನವಾಗಿ ನೀಡಬಯಸಿದ ಖಮ್ಮಂ ಜಿಲ್ಲೆಯ ಎತ್ತಿಂಡು ಗ್ರಾಮದ ಎರಡನೇ ವಾರ್ಡಿನ 124.398 ಚದರ ಮೀಟರ್ ವಿಸ್ತೀರ್ಣದ ಖಾಲಿ ಸ್ಥಳವನ್ನು ಸ್ವೀಕರಿಸಲು ನಿರ್ಣಯಿಸಲಾಯಿತು.

* * * *

ಭದ್ರತೆಯ ದೃಷ್ಟಿಯಿಂದಾಗಿ ತಿರುಮಲೆಯ ಸ್ವಾಮಿಯ ಬಂಗಾರದ ಪದಕಗಳನ್ನು ತಿ. ತಿ. ದೇ. ಪರಿಪಾಲನಾಭವನ, ತಿರುಮಲೆಯ ಲೇಪಾಕ್ಷಿ ಎಂಪೋರಿಯಂ ಪಕ್ಕದ ತಿ. ತಿ. ದೇ. ಪುಸ್ತಕ ಮಾರಾಟಕೇಂದ್ರ, ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ, ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಅತಿಥಿಗೃಹಗಳಲ್ಲಿ ಮಾತ್ರವೇ ಮಾರಾಟ ಮಾಡಲು ತೀರ್ಮಾನಿಸಲಾಯಿತು.

* * *

ಸಿಂಹಾಚಲದ ಶ್ರೀ ವರಾಹ ನರಸಿಂಹಸ್ವಾಮಿ ದೇವಸ್ಥಾನದ ಶ್ರೀ ಯೋಗನರಸಿಂಹಸ್ವಾಮಿ, ಹಾಗೂ ಶ್ರೀದೇವಿ ಭೂದೇವಿಯವರಿಗೆ ಮಾಡಿಸುವ ಆಭರಣಗಳು, ಸ್ವಾಮಿಯ ತಿರುನಾಮಗಳ ತಯಾರಿಕೆಯಲ್ಲಿ ತಿ. ತಿ. ದೇ. ಪರ್ಯವೇಕ್ಷಣೆ ಮಾಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ 2.25 ಕೋಟಿ ರೂಗಳ ವೆಚ್ಚದಲ್ಲಿ ಶ್ರೀ ವರಾಹಸ್ವಾಮಿ ಧರ್ಮಸತ್ರವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ತಿರುಮಲೆಯ ಸ್ವಾಮಿ ಪುಷ್ಕರಿಣಿಯ ನೀರನ್ನು ಆಗಿಂದಾಗ್ಗೆ ಶುಭ್ರಗೊಳಿಸಲು ಮದ್ರಾಸು ವಿಶ್ವ-ವಿದ್ಯಾನಿಲಯದ ಉಪಕುಲಪತಿಗಳೂ, ಜಲ ಶೋಧನಾತಜ್ಞರೂ ಆದ ಡಾ॥ ಬಿ. ಸುಂದರೇಶನ್ ಅವರ ಸಲಹೆಯ ಪ್ರಕಾರ 74.50 ಲಕ್ಷ ರೂಗಳ ವೆಚ್ಚದಲ್ಲಿ ಒಂದು ಯೋಜನೆಯನ್ನು ಕೈಗೆತ್ತಿಕೊಳ್ಳಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿನಂತೆಯೇ ತಿರುಪತಿ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿ, ಶ್ರೀ ಕೋದಂಡರಾಮಸ್ವಾಮಿ ದೇವಾಲಯದ ಬಳಿ, ಕಪಿಲತೀರ್ಥ, ತಿರುಚಾನೂರು ಪದ್ಮಾವತೀ ದೇವಾಲಯದ ಬಳಿ, ಹಾಗೂ ಮಂಗಾಪುರದ ಶ್ರೀ ವೆಂಕಟೇಶ್ವರ ದೇವಾಲಯ ಬಳಿ ಯಾತ್ರಿಕರ ಪಾದರಕ್ಷೆಗಳನ್ನು ಉಚಿತವಾಗಿ ಭದ್ರಪಡಿಸಲು ಸ್ವಯಂಸೇವಕರನ್ನು ನಿಯಮಿಸಲು ತೀರ್ಮಾನಿಸಲಾಯಿತು.

* * * *

ಹೊಸ ದಿಹಲಿಯ ಶ್ರೀ ವೆಂಕಟೇಶ್ವರ ಕಲಾಶಾಲೆಯಲ್ಲಿ ಕಂಪ್ಯೂಟರ್ ವಿಜ್ಞಾನ, ಎಲೆಕ್ಟ್ರಾನಿಕ್ಸ್ ಮೊದಲಾದ ಹೊಸ ಶಿಕ್ಷಣದ ಕೋರ್ಸುಗಳನ್ನು ಪ್ರವೇಶಗೊಳಿಸಲು ತೀರ್ಮಾನಿಸಲಾಯಿತು.

* * * *

1986-87 ರ ವಿದ್ಯಾಸಂವತ್ಸರದಲ್ಲಿ ತಿರುಪತಿಯ ಶ್ರೀ ಪದ್ಮಾವತೀ ಮಹಿಳಾ ಕಾಲೇಜಿನಲ್ಲಿ ಕಂಪ್ಯೂಟರ್ ವಿಜ್ಞಾನ, ಫೋಟೋಗ್ರಫಿ ಮೊದಲಾದ ಕೋರ್ಸುಗಳನ್ನು ಪದವಿ ಪೂರ್ವ ಮಟ್ಟದಲ್ಲಿ ಪ್ರವೇಶಗೊಳಿಸಲು ತೀರ್ಮಾನಿಸಲಾಯಿತು.

* * * *

ನಲ್ಗೊಂಡ ಜಿಲ್ಲೆಯ ಭೋಂಗಿರಿ ಪಟ್ಟಣದಲ್ಲೂ ಮಂಡಲ ಕೇಂದ್ರಗಳಾದ ಚಾಟುಪ್ಪಳಿ, ರಾಜಪೇಟೆ, ತುರಕಪಲ್ಲಿ, ಆಲಯರ್‌ಗಳಲ್ಲೂ, ಪಶ್ಚಿಮ ಗೋದಾವರೀ ಜಿಲ್ಲೆಯ ದ್ವಾರಕಾ ತಿರುಮಲೆಯಲ್ಲೂ, ಖಮ್ಮಂ ಜಿಲ್ಲೆಯ ಕೊತ್ತಗೂಡೆಂದಲ್ಲಿಯೂ, ವರಂಗಲ್ ಜಿಲ್ಲೆಯ ಜನಗಾವ್‌ನಲ್ಲೂ, ಪ್ರಕಾಶಂ ಜಿಲ್ಲೆಯ ಚೀರಾಲದಲ್ಲೂ, ತಿ. ತಿ. ದೇ. ನಿಯಮಗಳ ಪ್ರಕಾರ ಕಲ್ಯಾಣಮಂಡಪಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಕಾಕಿನಾಡದ ಸ್ಮಾರ್ತ ಸಂಸ್ಕೃತ ಪಾಠಶಾಲೆಯಲ್ಲಿ ಕೆಲಸ ಮಾಡುತ್ತಿರುವ ಇಬ್ಬರು ಸಂಸ್ಕೃತ ಪಂಡಿತರಿಗೆ 86-87 ರ ವಿದ್ಯಾಸಂವತ್ಸರಕ್ಕಾಗಿ ರೂ. 4800/- ಸಹಾಯಧನ ನೀಡಲು ತೀರ್ಮಾನಿಸಲಾಯಿತು.

* * * *

ಪೂರ್ವಗೋದಾವರಿ ಜಿಲ್ಲೆಯ ಶಂಖವರಂ ಮಾರ್ಗದಲ್ಲಿರುವ ಶ್ರೀ ಶಾಂತಿ ಆಶ್ರಮದ ಆಧ್ವರ್ಯದಲ್ಲಿನ ಅನಾಥ ಶರಣಾಲಯಕ್ಕೆ ರೂ. 12500/- ಆರ್ಥಿಕ ನೆರವು ನೀಡಲು ತೀರ್ಮಾನಿಸಲಾಯಿತು.

---

**ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತವಿದೆ.**

---

(37ನೇ ಪುಟದಿಂದ)

## ತಿರುಮಲೆಯಲ್ಲಿ ಮಹಾರಾಷ್ಟ್ರದ ರಾಜ್ಯಪಾಲರು

ಮಹಾರಾಷ್ಟ್ರದ ರಾಜ್ಯಪಾಲ ಡಾ॥ ಶಂಕರದಯಾಳ ಶರ್ಮ ಅವರು ಆಗಸ್ಟ್ ತಿಂಗಳ 19 ರಂದು ಮಧ್ಯಾಹ್ನ ತಿರುಮಲೆಯನ್ನು ಸೇರಿ ಸ್ವಾಮಿ ಸಂದರ್ಶನವನ್ನು ಹೊಂದಿ ಆರಾಧನೆ ನಡೆಸಿದರು.

ರಾಜ್ಯಪಾಲರನ್ನು ಆಲಯಮರ್ಯಾದೆಗಳೊಂದಿಗೆ ತಿ. ತಿ. ದೇ. ಉಪಕಾರ್ಯ ನಿರ್ವಹಣಾಧಿಕಾರಿ ಶ್ರೀ ಮುನಿಕೃಷ್ಣ ಮತ್ತಿತರ ಅಧಿಕಾರಿಗಳು ಸ್ವಾಗತಿಸಿದರು.

ಈ ಹಿಂದೆ ಆಂಧ್ರಪ್ರದೇಶದ ರಾಜ್ಯಪಾಲರಾಗಿದ್ದಾಗ ಡಾ॥ ಶಂಕರದಯಾಳ ಶರ್ಮರು ತಮ್ಮ ಅಲ್ಪಾವಧಿ ರಾಜ್ಯಪಾಲ ಅವಧಿಯಲ್ಲಿ ಬಹುಬಾರಿ ತಿರುಮಲೆಯ ಸ್ವಾಮಿಯ ಸಂದರ್ಶನ ಹೊಂದಿದ್ದರಾದರೂ, ಮಹಾರಾಷ್ಟ್ರದ ರಾಜ್ಯಪಾಲರಾಗಿ ಅಲ್ಲಿಗೆ ಹೊರಟ ಮೇಲೆ ತಿರುಮಲೆಗೆ ಬರುತ್ತಿರುವುದು ಇದೇ ಮೊದಲಬಾರಿ.

## ವೇದ ರಹಸ್ಯ ಎಲ್ಲರಿಗೂ ತಿಳಿಯುವಂತಾಗಲಿ –ಡಾ॥ ಶಂಕರ ದಯಾಳಶರ್ಮ

ಸಂಸ್ಕೃತ ಭಾಷೆಯನ್ನು ಸರಳಗೊಳಿಸಿ ವೇದಗಳಲ್ಲಿನ ರಹಸ್ಯಗಳನ್ನು ಪ್ರಜೆಗಳೆಲ್ಲರಿಗೂ ತಿಳಿಯುವಂತೆ ಮಾಡಬೇಕು ಎಂದು ಡಾ॥ ಶಂಕರದಯಾಳ ಶರ್ಮ ಅಭಿಪ್ರಾಯಪಟ್ಟರು. ವೇದಶಾಸ್ತ್ರಗಳು ಮಾನವನನಲ್ಲಿನ ಆಲೋಚನಾಶಕ್ತಿಯನ್ನು ಹೆಚ್ಚಿಸಿ ಜ್ಞಾನಾಭಿವೃದ್ಧಿಗೆ ಪ್ರೇರಕವಾಗುವುದೆಂದೂ ಅವರು ಹೇಳಿದರು.

ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಸಂಸ್ಕೃತೋತ್ಸವಗಳಲ್ಲಿ ಮುಖ್ಯ ಅತಿಥಿಯಾಗಿ ಪಾಲುಗೊಂಡ ಮಹಾರಾಷ್ಟ್ರದ ರಾಜ್ಯಪಾಲರಾಗಿರುವ ವಿದ್ವಾಂಸ ಡಾ॥ ಶಂಕರದಯಾಳ ಶರ್ಮ ಅವರು ನಮ್ಮ ಪುರಾಣಶಾಸ್ತ್ರಗಳ ಬಗ್ಗೆ ಟೀಕೆಗಳು ಬಂದಾಗ ವಾಸ್ತವಗಳನ್ನು ಮುಂದಿಟ್ಟು ಟೀಕೆಗಳನ್ನು ಎದುರಿಸಬೇಕೆಂದು ಕರೆ ನೀಡಿದರು.

ಎಸ್. ವಿ. ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗಾಧ್ಯಕ್ಷ ಶ್ರೀಮನ್ನಾರಾಯಣ ಅವರು ಮಾತನಾಡುತ್ತ ಹುಟ್ಟಲಗಿದದಂತೆ ನಮ್ಮ ದೇಶದಲ್ಲಿಯೇ ಸಂಸ್ಕೃತ ಅವಜ್ಞೆಗೆ ಗುರಿಯಾಗಿದೆ ಎಂದು ಖೇದ ವ್ಯಕ್ತಪಡಿಸಿ, ಈ ಸ್ಥಿತಿ ತೊಲಗಿ ಸಂಸ್ಕೃತವನ್ನು ಸರ್ವರೂ ಆದರಿಸುವ ದಿನ ಬೇಗ ಬರಲಿ ಎಂದು ಹಾರೈಸಿದರು.

ಕೇಂದ್ರೀಯ ವಿದ್ಯಾಪೀಠದ ಪ್ರಾಂಶುಪಾಲ ಶ್ರೀರಾಮಾನುಜ ತಾತಾಚಾರ್ಯ ಅವರು ಸಭೆಯನ್ನು ಸ್ವಾಗತಿಸಿದರು.

## ತಿರುಮಲೆಯಲ್ಲಿ ಬಿಹಾರದ ರಾಜ್ಯಪಾಲರು

ಈಚೆಗೆ ಬಿಹಾರದ ರಾಜ್ಯಪಾಲರಾದ ಶ್ರೀ ಪೆಂಡೆಕಂಟಿ ವೆಂಕಟಸುಬ್ಬಯ್ಯ ಅವರು ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿ ಸೇವೆಯಲ್ಲಿ ಭಾಗವಹಿಸಿದ್ದರು. ತಿ. ತಿ. ದೇವಸ್ಥಾನಗಳ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ಅವರು ರಾಜ್ಯಪಾಲದಂಪತಿಗಳನ್ನು ಆಲಯ ಮರ್ಯಾದೆಗಳೊಡನೆ ಸ್ವಾಗತಿಸಿದರು. ಶ್ರೀಯುತರು ರಾಜ್ಯಪಾಲರಾದಮೇಲೆ ತಿರುಮಲೆಗೆ ಆಗಮಿಸುತ್ತಿರುವುದು ಇದು ಎರಡನೆಯ ಬಾರಿ.

## ತಿರುಮಲೆಯಲ್ಲಿ ಹೆಚ್ಚಿದ ಆದಾಯ

ತಿರುಮಲೆಯಲ್ಲಿ ಜುಲೈ 28 ರಂದು ಸ್ವಾಮಿ ಹುಂಡಿ ಪ್ರಸಾದಗಳ ಮೂಲಕ ಹಾಗೂ ಅರ್ಜಿತ ಸೇವೆಗಳಿಂದ ಒಂದೇ ದಿನದಲ್ಲಿ 10 ಲಕ್ಷ ರೂಗಳ ಆದಾಯವುಂಟಾಯಿತೆಂದೂ, ಇದು ಆ ಹಿಂದಿನ ಮೂರು ತಿಂಗಳಲ್ಲಿ ಅತಿ ಹೆಚ್ಚಿನ ಆದಾಯವೆಂದೂ ವರದಿಯಾಗಿದೆ.

## ಸ್ವಾಮಿಗೆ ವಜ್ರದೋಲೆಯ ಕಾಣಿಕೆ

ಕೇರಳಕ್ಕೆ ಸೇರಿದ ಅನಂತಲಕ್ಷ್ಮಿ ಎಂಬುವವರು ಆಗಸ್ಟ್ 3 ರ ಭಾನುವಾರದಂದು ಶ್ರೀ ವೆಂಕಟೇಶ್ವರಸ್ವಾಮಿಗೆ ಎರಡು ವಜ್ರದ ವಾಲೆಗಳನ್ನು ಸಮರ್ಪಿಸಿದರು. ಒಂದೊಂದು ವಾಲೆಯಲ್ಲೂ ಏಳು ವಜ್ರಗಳಿವೆಯೆಂದು ಅಧಿಕಾರಿಗಳು ತಿಳಿಸಿದ್ದಾರೆ.

## ಮಧ್ಯಪ್ರದೇಶದ ಕಾಳಿದಾಸ, ಕಬೀರ ಸಮ್ಮಾನಗಳು

ಮಧ್ಯಪ್ರದೇಶ ಸರ್ಕಾರ ನಿರ್ವಹಿಸುತ್ತಿರುವ ಅಖಿಲಭಾರತ ವ್ಯಾಪ್ತಿಯ ಕಾಳಿದಾಸ ಕಬೀರ ಸಮ್ಮಾನಗಳನ್ನು 1986–87 ಕ್ಕಾಗಿ ತೀರ್ಮಾನಿಸಲಾಗಿದೆ.

ಶಾಸ್ತ್ರೀಯ ನೃತ್ಯರಂಗದಲ್ಲಿನ ಕಾಳಿದಾಸ ಸಮ್ಮಾನವನ್ನು ಈ ಬಾರಿ ಪ್ರಸಿದ್ಧ ಕಥಕ್ ನೃತ್ಯತಜ್ಞ ಶ್ರೀ ಬಿರ್ಜು ಮಹಾರಾಜ್ ಅವರಿಗೆ ನೀಡಲಾಗಿದೆ. ಈ ಸಮ್ಮಾನದ ಮೊತ್ತ ಒಂದು ಲಕ್ಷ ರೂಗಳೂ ಹಾಗೂ ಸಮ್ಮಾನ ಫಲಕ.

ಸಾಹಿತ್ಯ ರಂಗದಲ್ಲಿನ ಕಬೀರ ಸಮ್ಮಾನ ಕನ್ನಡದ ಖ್ಯಾತ ಕವಿ ಶ್ರೀ ಎಂ. ಗೋಪಾಲಕೃಷ್ಣ ಅಡಿಗರಿಗೆ ನೀಡಲಾಗಿದೆ. ಈ ಸಮ್ಮಾನದ ಮೊತ್ತ ಒಂದು ಲಕ್ಷರೂಗಳು ಹಾಗೂ ಸಮ್ಮಾನ ಫಲಕ.

## ಡಾ॥ ಡಿ. ವಿ. ಜಿ. ಅವರ ಶತಮಾನೋತ್ಸವ ಸಿದ್ಧತೆ

ಕನ್ನಡ ಖ್ಯಾತಕವಿ, ಬಹುಮುಖ ಚಿಂತನ ಶೀಲ ಸಾರ್ವಜನಿಕ ಸೇವಾಪರ ದಿವಂಗತ ಡಾ॥ ಡಿ. ವಿ. ಜಿ. ಅವರ ಶತಮಾನೋತ್ಸವವನ್ನು ಪುಸ್ತಕ ಪ್ರಕಟನೆ, ಗಮಕ, ಸಂಗೀತ ಸ್ಪರ್ಧೆಗಳು, ವಿಚಾರ ಸಂಕಿರಣಗಳು ಪ್ರಚಾರೋಪನ್ಯಾಸಗಳು, ಮೊದಲಾದವುಗಳ ಮೂಲಕ ಆಚರಿಸಲು ನಿರ್ಧರಿಸಲಾಗಿದೆ.

ಪ್ರಸಿದ್ಧ ಗಮಕಿ ಶ್ರೀ ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ಡಿ. ವಿ. ಜಿ. ಪ್ರತಿಷ್ಠಾನ ಏರ್ಪಡಿಸಿದ್ದ ಅಭಿಮಾನಿಗಳ ಸಭೆಯಲ್ಲಿ ಈ ತೀರ್ಮಾನಗಳನ್ನು ಕೈಗೊಳ್ಳಲಾಯಿತು ಎಂದು ಡಿ. ವಿ. ಜಿ. ಪ್ರತಿಷ್ಠಾನದ ಪತ್ರಿಕಾವರದಿ ತಿಳಿಸಿದೆ.

ಮಂಕುತಿಮ್ಮನ ಕಗ್ಗದ ಕವಿ ಡಾ॥ ಡಿ. ವಿ. ಜಿ. ಅವರು ಕನ್ನಡದ ಹಿರಿಯ ಪತ್ರಕರ್ತರೂ, ರಾಜ್ಯಶಾಸ್ತ್ರತಜ್ಞರೂ, ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯ ಸ್ಥಾಪಕರೂ ಆಗಿದ್ದು ಅವರ ಭಗವದ್ಗೀತಾ ತಾತ್ಪರ್ಯಕ್ಕೆ (ಜೀವನ ಧರ್ಮಯೋಗ) ಕೇಂದ್ರಸಾಹಿತ್ಯ ಅಕಾಡಮಿ ಪ್ರಶಸ್ತಿ ದೊರೆತಿತ್ತು. ಶ್ರೀಯುತರು ಹುಟ್ಟಿದ್ದು 23–3–1887 ರಲ್ಲಿ.

———

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ. —ಅಕ್ಟೋಬರ್ 1986**

**ಕುರುಕ್ಷೇತ್ರದ ಇತಿಹಾಸ**
—ಆದ್ಯರಂಗಾಚಾರ್ಯ

**ಕರ್ನಾಟಕ ನೃತ್ಯ**
— ಡಾ॥ ಎಸ್. ಅನಂತರಂಗಾಚಾರ್ಯ

**ಚೇರದೇಶದ ವಿಷ್ಣುಕ್ಷೇತ್ರಗಳು**
— ರಘುಸುತ

**ಲಕ್ಷ್ಮೀಶನ ದೇವನೂರು**
— ದೇವನೂರು ಪಾಂಡುರಂಗ

**ಕುರುಕ್ಷೇತ್ರ**
ಆದ್ಯರಾಮಾಚಾರ್ಯ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಅಕ್ಟೋಬರ್ 1986

| | | |
|---|---|---|
| 2. | ಗುರುವಾರ | ಗಾಂಧೀಜಯಂತಿ |
| 3. | ಶುಕ್ರವಾರ | ಮಹಾಲಯ ಅಮಾವಾಸ್ಯೆ |
| 4. | ಶನಿವಾರ | ತಿರುಮಲೆಯ ಬ್ರಹ್ಮೋತ್ಸವಾರಂಭ – ಧ್ವಜಾರೋಹಣ |
| 8. | ಬುಧವಾರ | ತಿರುಮಲೆಯಲ್ಲಿ ಗರುಡೋತ್ಸವ |
| 9. | ಗುರುವಾರ | ಸರಸ್ವತೀ ಪೂಜೆ |
| 11. | ಶನಿವಾರ | ತಿರುಮಲೆಯಲ್ಲಿ ರಥೋತ್ಸವ, ಮಹಾಷ್ಟಮಿ ಮಹಾನವಮಿ, ಆಯುಧಪೂಜೆ |
| 12. | ಭಾನುವಾರ | ತಿರುಮಲೆಯ ಬ್ರಹ್ಮೋತ್ಸವಸಮಾಪ್ತಿ–ಚಕ್ರಸ್ನಾನ ವಿಜಯದಶಮಿ |
| 17. | ಶುಕ್ರವಾರ | ಸಂಪೂರ್ಣ ಚಂದ್ರಗ್ರಹಣ |
| 31. | ಶುಕ್ರವಾರ | ನರಕಚತುರ್ದಶಿ, ವೇದಾಂತದೇಶಿಕರ ಉತ್ಸವಾರಂಭ |

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನ | ಪ್ರಾ 8–00 | ಪ್ರಾ 8–30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | „ | 40–00 |
| 3. | ಪುಳಿಯೋಗರೆ | „ | 50–00 |
| 4. | ಪೊಂಗಲು | „ | 55–00 |
| 5. | ಸಕ್ಕರಪೊಂಗಲ್ | „ | 55–00 |
| 6. | ಶಾಕರ ಭಾತ್ | | 85–00 |
| 7. | ಕೇಸರೀ ಭಾತ್ | | [illegible]0–00 |
| 8. | ಸೀರ | | 155–00 |

ವಿವರಗಳಿಗೆ:

**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

Regd. No. H/TRP/14 ವಾರ್ಷಿಕ ಚಂದಾ ರೂ 12-00

# ಶ್ರೀ ವೆಂಕಟೇಶ್ವರ ದೇವಾಲಯ
# ತಿರುಮಲೆ

**3-10-86** ರಿಂದ



**12-10-86** ವರೆಗೆ

## ವಾರ್ಷಿಕ ಬ್ರಹ್ಮೋತ್ಸವ

| ದಿನಾಂಕ | ದಿನ | ಬೆಳಗ್ಗೆ | ರಾತ್ರಿ |
|---|---|---|---|
| 3-10-86 | ಶುಕ್ರವಾರ | — | ಸೇನಾಪತಿ ಉತ್ಸವ, ಅಂಕುರಾರ್ಪಣೆ. |
| 4-10-86 | ಶನಿವಾರ | ಧ್ವಜಾರೋಹಣ, ತಿರುಚ್ಚಿ ಉತ್ಸವ | ದೊಡ್ಡ ಶೇಷವಾಹನ |
| 5-10-86 | ಭಾನುವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 6-10-86 | ಸೋಮವಾರ | ಸಿಂಹವಾಹನ | ಮುತ್ತಿನ ಪಲ್ಲಕ್ಕಿವಾಹನ |
| 7-10 86 | ಮಂಗಳವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 8-10-86 | ಬುಧವಾರ | ಪಲ್ಲಕಿಯಲ್ಲಿ ಮೋಹಿನೀ ಅವತಾರ | ಗರುಡೋತ್ಸವ |
| 9-10-86 | ಗುರುವಾರ | ಹನುಮದ್ವಾಹನ<br>ಸಾಯಂಕಾಲ ವಸಂತೋತ್ಸವ | ಗಜವಾಹನ |
| 10-10-86 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 11-10-86 | ಶನಿವಾರ | ರಥೋತ್ಸವ | ಅಶ್ವವಾಹನ |
| 12-10-86 | ಭಾನುವಾರ | ತೀರ್ಥವಾರಿ, ಅವಭೃತೋತ್ಸವ | ಧ್ವಜಾವರೋಹಣ. |

ನೀವೂ ಬನ್ನಿ ! ನಿಮ್ಮವರನ್ನೂ ಕರೆತನ್ನಿ !!